ಕ್ಕಾಗಿ ಬಂದುಹೋದನು.

ರತ್ನಾ ಶಾಂತಾ ಬಹಳ ಅತ್ತರು. ಅವರಿಗೆ ಸಮಾಧಾನ ಹೇಳಲು ಬಂದ ವೇಣೂಬಾಯಿ ಕೂಡ ಅಳತೊಡಗಿದಳು. ಗಂಗವ್ವನೇ ಧೈರ್ಯತಗೆದುಕೊಂಡು, ರತ್ನಾ ಶಾಂತಾರನ್ನು ಎದೆಗೆ ಅವಚಿಗೊಂಡು, 'ನಾ ನಿಮ್ಮ ತಾಯಿ ಅಂತ ತಿಳ ಕೊಳ್ರಿ' ಎಂದು ಸಮಾಧಾನ ಹೇಳಿದಳು.

ಅಂದು ಗಂಗವ್ವ ದುಃಖದ ಮನೆಗೆ ಇರಲು ಬಂದಳು.

ತಮ್ಮನಿಗೆ ಬಹಳ ಹೊತ್ತು ಸಮಾಧಾನ ಹೇಳಿದಳು. ರಾಘಪ್ಪ ಕೇಳಿ ಕೊಂಡನು. ಅವನಿಗೆ ಸಾಂತ್ವನದ ಅವಶ್ಯಕತೆ ಉಳಿದಿರಲಿಲ್ಲ.

---

## ೩೬ : ದೇಸಾಯರಿಗೆ ಒಂದು ಪತ್ರ.

ಮರುದಿನ ರಾತ್ರಿ ಹತ್ತುಗಂಟೆಗೆ ಕಿಟ್ಟ ದುಃಖದ ಮನೆಯಿಂದ ತಮ್ಮ ಮನೆಗೆ ಮಲಗಲು ಹೊರಟನು. ಆಗ ಕೋಣೆಯಲ್ಲಿ ಬಹಳ ಹೊತ್ತು ಏನನ್ನೋ ಬರೆಯುತ್ತ ಕುಳಿತ ರಾಘಪ್ಪ ಅವನನ್ನು ಕರೆದು, 'ಈ ಪತ್ರ ನಾಳೆ ಮುಂಜಾನೆ ಅವರಿಗೆ ತಪ್ಪದೆ ಮುಟ್ಟಿಸು. ಈಗ ಅವರು ಮಲಕೊಂಡಿರತಾರ. ಅವರನ ಎಬ್ಬಿಸಬ್ಯಾಡ. ನಾಳೆ ನೀನಽ ಹೋಗಿ ಕೊಡು' ಎಂದು ಹೇಳಿದನು.

ಕಿಟ್ಟಿಗೆ ರಾತ್ರಿ ಬೇಗ ನಿದ್ದೆ ಹತ್ತಲಿಲ್ಲ. ಜನರೆಲ್ಲ ರಾಘಪ್ಪನನ್ನು ಹಳಿಯು ತ್ತಿದ್ದರು. ಕಿಟ್ಟಿಗೂ ಆದರ ಕಡಿಮೆಯಾಗಿತ್ತು. ಅದಕ್ಕಿಂತ ಹೆಚ್ಚಾಗಿ ಭೀತಿ ಹುಟ್ಟತೊಡಗಿತ್ತು.... 'ತಪ್ಪಿಗೆ ತಕ್ಕ ಶಿಕ್ಷೆ ಇದೇ ಜಗತ್ತಿನಲ್ಲಿ ದೊರಕು ತ್ತದೆಯೇ ?' ಎಂಬ ಸಮಸ್ಯೆ ಅವನನ್ನು ಕಾಡತೊಡಗಿತು. ಇಷ್ಟೆಲ್ಲ ಸಂಗತಿ ಅವನ ಕಣ್ಣೆದುರೇ ನಡೆದ ಮೇಲೆ ಭೀತಿ ಬಾರದೆ ಇನ್ನೇನು ?

ಮರುದಿನ ತಡವಾಗಿ ಎಚ್ಚರಾಯಿತು. ಎದ್ದವನೇ ಮುಖ ತೊಳೆದು ಕೊಂಡು, ದೇಸಾಯರ ಮನೆಗೆ ಹೋಗಿ ಅವರಿಗೆ ಚೀಟಿ ಮುಟ್ಟಿಸಿ, ತಾನು ದುಃಖದ ಮನೆಯತ್ತ ಲಗುಬಗೆಯಿಂದ ನಡೆದನು.

ಅವನು ಅರ್ಧದಾರಿಯಲ್ಲಿ ಇರುವಾಗಲೆ ಹಿಂದಿನಿಂದ ಭರದಿಂದ ದೇಸಾ ಯರ ಟಾಂಗಾ ಬಂದಿತು. ದೇಸಾಯರು ಟಾಂಗಾ ನಿಲ್ಲಿಸಿ, 'ನಾನೂ ಅಲ್ಲೇ

ಹೊರಟೇನಿ. ಟಾಂಗಾ ಹತ್ತು' ಎಂದು ಹೇಳಿದರು. ಕಿಟ್ಟಿ ಆಶ್ಚರ್ಯಬಡುತ್ತ ಹತ್ತಿದನು. ಇಬ್ಬರೂ ರಾಘಪ್ಪನ ಮನೆ ಮುಟ್ಟಿದಾಗ ಬೆಳಗಿನ ಒಂಬತ್ತು ಆಗಿರಬಹುದು. ಮನೆಯ ಸುತ್ತಲೂ ಜನರು ನೆರೆದಿದ್ದರು. ಒಳಗಿನಿಂದ ಸ್ತ್ರೀಯರ ಆರ್ತರೋದನ ಕೇಳಿಸುತ್ತಿತ್ತು. ಬಾಗಿಲ ಬಳಿ ಪೋಲೀಸನೋರ್ವನು ಪಹರೆ ಮಾಡುತ್ತ ನಿಂತಿದ್ದನು.

* * * *

ರಾತ್ರಿ ಒಂದೆರಡು ಬಾರಿ ನರಳಿದ ದನಿ ರತ್ನಾಳಿಗೆ ಕೇಳಿಸಿತ್ತಂತೆ. ಆದರೆ ಆಕೆಗೆ ತನ್ನ ಅತ್ತೆಯ ಬಡಬಡಿಸುವ ಚಟದ ಪರಿಚಯವಿತ್ತು. ಅಲ್ಲದೆ ಮರಣಾಚ್ಛಾದಿತ ಮನೆ. ಹೆದರಿಕೆಯಿಂದ ಹಾಗೆಯೇ ಮಲಗಿಕೊಂಡಳು. ಉಳಿದವರೆಲ್ಲ ದಣಿದು ಯಾವ ಅರಿವಿಲ್ಲದೆ ಮಲಗಿದ್ದರು. ಪ್ರತಿನಿತ್ಯದಂತೆ ಆರುಗಂಟೆಗೆ ಎದ್ದ ಗಂಗವ್ವ ತಮ್ಮನ ಕೋಣೆಯ ಬಾಗಿಲು ಇಕ್ಕಿದುದನ್ನು ನೋಡಿದಳು. ಅವಳೂ ಚಿಕಿತ್ಸೆ ಮಾಡಲಿಲ್ಲ. ಆದರೆ ಎಂಟುಗಂಟೆಯಾದರೂ ರಾಘಪ್ಪ ಹೊರಗೆ ಬರದಿರಲು ಗಂಗವ್ವ ರತ್ನಳನ್ನು ಅವನನ್ನು ಎಬ್ಬಿಸಲು ಕಳಿಸಿದಳು. ಒಳಚಿಲಕ ಹಾಕಿತ್ತು. ಎಷ್ಟು ಬಾಗಿಲ ಬಡಿದರೂ ರಾಘಪ್ಪ ಎದ್ದು ಬಾಗಿಲ ತೆಗೆಯಲಿಲ್ಲ. ಕೊನೆಗೆ ಭೀಮಸೇನನ್ನು ಕರೆಸಿ ಹಿಮ್ಮಗ್ಗಲಿನ ಕಿಡಿಕಿಯನ್ನು ಏರಿ ಹಣಿಕಿ ಹಾಕಲು ಹೇಳಿದರು. ಕೆಂಪು ಕಾಜಿನ ಹರಳಿನೊಳಗಿಂದ ಒಳಗಿನದು ಏನೂ ಕಾಣಿಸ ಒಲ್ಲದು. ಆಗ ಕಾಜು ಒಡೆಯಲು ರತ್ನಾ ಹೇಳಿದಳು. ಕಾಜನ್ನು ಒಡೆದು ಒಳಗೆ ನೋಡಿ ಜಂತಿಯಿಂದ ನೇತಾಡುತ್ತಿದ್ದ ರಾಘಪ್ಪನ ಪ್ರೇತವನ್ನು ಕಂಡು, ನಿಂತಲ್ಲಿಂದಲೇ ಚೀತ್ಕಾರ ಮಾಡಿ, ಬವಳಿ ಬಂದು ಕೆಳಗೆ ಬಿದ್ದನು. ಒಮ್ಮೆಲೆ ಸುದ್ದಿ ಹಬ್ಬಿ ಜನರು ನೆರೆದರು. ಪೋಲೀಸರು ಬಂದು ಅದೇ ಪಂಚನಾಮೆ ಪ್ರಾರಂಭವಾಗಿತ್ತು. ಪ್ರೇತದ ಮೇಲಿನ ಅಂಗಿಯ ಕಿಸೆಯಲ್ಲಿ ಒಂದು ಚೀಟಿ ದೊರೆತಿತು.

'ಸಂಬಂಧ ಪಟ್ಟ ಎಲ್ಲ ಜನರಿಗೆ, ರಾಘವೇಂದ್ರ ವಾಮನ ಬಿಂದಗೋಳ' ನಾನು ತಿಳಿಸುವದೇನೆಂದರೆ ನಾನು ಹೆಂಡತಿಯ ಮರಣದ ಶೋಕದಿಂದ ಹಾಗು ಇತರ ಚಿಂತೆಗಳ ಮೂಲಕ ನರಜನ್ಮಕ್ಕೆ ಬೇಸತ್ತು, ಪಾಪಪುಣ್ಯಗಳ ವಿಚಾರ ಮಾಡದೆ ಸ್ವಂತ ಖುಷಿಯಿಂದ ನನ್ನ ಕೋಣೆಯ ಜಂತಿಯಿಂದ ಹಗ್ಗವನ್ನು ತೂಗುಬಿಟ್ಟು ಉರುಲು ಹಾಕಿಕೊಳ್ಳುತ್ತೇನೆ. ಇದು ನನ್ನ ಖುಷಿಯಿಂದ ಆದ ಸಂಗತಿ. ಇದರ ಜವಾಬುದಾರಿ ಇನ್ನಾರ ಮೇಲೆಯೂ ಇರುವದಿಲ್ಲ; ಯಾರ

ಮೇಲೂ ಹಾಕಬಾರದು; ಯಾರೂ ಖೇದ ಪಟ್ಟುಕೊಳ್ಳಬಾರದು. ನನ್ನ ಶವ ಸಂಸ್ಕಾರದ ಬಾಬತ್ತು ನಮ್ಮ ಓಣಿಯ ಮೂಲೆಗೆ ಇರುವ ಕಟ್ಟಿಗೆಯ ಅಡ್ಡೆಯ ಮಾಲಕರಿಗೆ ಹದಿನೈದು ರೂಪಾಯಿ ಹಣ ಮುಟ್ಟಿಸಿ ಅವರ ಪಾವತಿಯನ್ನು ಇದರ ಜೊತೆಗೆ ಇಟ್ಟಿರುತ್ತೇನೆ. ಈಗ ಕೆಲದಿನಗಳ ಲಾಗಾಯಿತು ನನಗೆ ಹುಚ್ಚು ಹಿಡಿದೀತೆಂಬ ಭಯ ಬಹಳ ಹುಟ್ಟಿದ ಮೂಲಕ ಈ ಮೂರು ತಿಂಗಳ ಹಿಂದೆ ಒಂದು ಮೃತ್ಯುಪತ್ರ ಮಾಡಿಸಿದ್ದೆನು. ಅದೇ ನನ್ನ ನಿಜವಾದ ಕಾಯ್ದೆ ಶೀರ ಮೃತ್ಯುಪತ್ರವೆಂದು ತಿಳಿದುಕೊಳ್ಳಬೇಕು, ಎಂದು ನಾನು ಪ್ರಮಾಣ ಮಾಡಿ ಹೇಳುತ್ತೇನೆ. ಮೃತ್ಯುಪತ್ರವು ತಿಜೋರಿಯಲ್ಲಿ ಇದ್ದು ತಿಜೋರಿಯ ಕೀಲಿ ಕೈ ಇದರ ಜೊತೆಗೆ ಇದೆ. ತಿಜೋರಿಯಲ್ಲಿ ಒಂದುನೂರಾ ಎಪ್ಪತ್ತು ಮೂರು ರೂಪಾಯಿ ಎಂಟು ಆಣೆ ಆರು ಪೈ ರಕಮು ಇರುತ್ತದೆ. ತಿಜೋರಿ ಹಾಗು ಮೃತ್ಯುಪತ್ರ ಇವುಗಳನ್ನು ನನ್ನ ಅಳಿಯ ಚಿ|| ಕೃಷ್ಣಾಜಿ ಸ್ವಾಮಿರಾವ ಕುಲಕರ್ಣಿ ಇವರು ತಮ್ಮ ತಾಬೇದಲ್ಲಿ ತೆಗೆದುಕೊಳ್ಳತಕ್ಕದ್ದು. ಹಾಗು ಇದ್ದ ಹಣದಲ್ಲಿ ನನ್ನ ಹೆಂಡತಿಯ ಕರ್ಮ ಮಾಡಿಸತಕ್ಕದ್ದು. ಎಲ್ಲ ಉತ್ತರಾಧಿಕಾರ ಅವರದೇ ಇರುತ್ತದೆ. ಇದನ್ನೆಲ್ಲ ಬರೆಯುವಾಗ ನಾನು ನಿಚ್ಚಳ ಬುದ್ಧಿಯಿಂದ ಇದ್ದು ಯಾವ ಮಾದಕ ಪದಾರ್ಥವನ್ನೂ ಸೇವಿಸಿರುವದಿಲ್ಲ.'

ಕೆಳಗೆ ರಾಘಪ್ಪನ ಸಹಿ ಹಾಗು ಮುನ್ನಾದಿನದ ತಾರೀಖು ಇದ್ದಿತು. ಅದೇ ತಾರೀಖು ಕಟ್ಟಿಗೆಯ ಅಡ್ಡೆಯ ಪಾವತಿಯ ಮೇಲೆಯೂ ಇತ್ತು. ಕಟ್ಟಿಗೆಯ ಅಡ್ಡೆಯವನು, 'ನಾಳೆ ಎರಡು ಬಂಡಿ ಕಟ್ಟಿಗೆ ಬೇಕು' ಎಂದು ಹೇಳಿ ರಾಘಪ್ಪ ರೂಪಾಯಿ ಕೊಟ್ಟು ಹೋದರು. ವರ್ಷದ ಬಳಿಕೆಗೆ ಎಂದು ತಿಳಿದು ನಾವು ಇನ್ನುಮೇಲೆ ಅವರು ಹೇಳಿ ಕಳಿಸಿದಾಗ ಕಳಿಸುವವರಿದ್ದೆವು.' ಎಂದು ಜವಾಬು ಕೊಟ್ಟನು. ರಾಘಪ್ಪನ ಚೀಟಿಯ ಮೂಲಕ ಪೋಲೀಸರು ವಿಶೇಷ ಚಿಕಿತ್ಸೆ ಮಾಡಲಿಲ್ಲ. ಬಾಗಿಲಿಗೆ ಒಳಚಿಲಕವಿದ್ದು ಬಾಗಿಲು ಮುರಿದು ಒಳಗೆ ಹೋಗಬೇಕಾಯಿತಾದ್ದರಿಂದ ಯಾವ ವಿಷಯದ ಬಗೆಗೂ ಸಂದೇಹ ಎತ್ತಲಿಲ್ಲ.

ಕಿಟ್ಟಿ ದೇಸಾಯರ ಕಡೆಗೆ ಸಂಶಯದಿಂದ ನೋಡಿದನು. ದೇಸಾಯರು 'ನೀನು ತಂದ ಚೀಟಿ ನಿನಗೆ ತೋರಿಸತೇನಿ. ಅವರ ಸುದ್ದಿ ಇಲ್ಲಿ ಎತ್ತಬ್ಯಾಡ. ಮುಂದ ಹೆಚ್ಚು ತ್ರಾಸು ಆದೀತು.' ಎಂದು ಹೇಳಿದರು....

ಪೋಲೀಸರು 'ಕಾರಣ' ಕಾಲಮ್ಮಿನಲ್ಲಿ 'ಹೆಂಡತಿಯ ಮರಣದ ದುಃಖದ

ಮೂಲಕ ಹಾಗು ಇತರ ಚಿಂತೆಗಳ ಮೂಲಕ' ಎಂದು ಬರೆದುಕೊಂಡು ಶವವನ್ನು ಉತ್ತರಾಧಿಕಾರಿಯಾದ ಕಿಟ್ಟಿಯ ವಶಕ್ಕೆ ಕೊಟ್ಟರು. ಶವವನ್ನು ನೋಡಿ ದೇಸಾಯರು ಹೆಣ್ಣುಮಕ್ಕಳಿಗೆ ಯಾರಿಗೂ ತೋರಿಸಕೂಡದೆಂದು ತಿಳಿಸಿದರು. ಕಿಟ್ಟಿ ಕೂಡ ಅಧೈರ್ಯದಿಂದ ಒಮ್ಮೆಯೇ ನೋಡಿದನು. ಆ ಸುಂದರವಾದ ಮುಖವು ಜಗಳಾಡುವವರಂತೆ ಅವಡುಗಚ್ಚಿತ್ತು. ಒಂದು ಕಣ್ಣು ಇನ್ನೊಂದಕ್ಕಿಂತ ತುಸು ಹೆಚ್ಚು ಹೊರಗೆ ಬಂದಿತ್ತು.

ಬೇರೆ ವಿಚಾರ ಮಾಡದೆ ಕಿಟ್ಟಿಯನ್ನು ಯಾರಿಗೂ ಸಮೀಪಕ್ಕೆ ಬಾರಗೊಡದಂತೆ ತಡೆಯಲು ನಿಲ್ಲಿಸಿ ದೇಸಾಯರು ಮುಂದಿನ ಕೆಲಸಕ್ಕೆ ತೊಡಗಿದರು. ಒಂದು ಗಂಟೆಯೆನ್ನುವಷ್ಟರಲ್ಲಿ ಪ್ರೇತವು ಸ್ಮಶಾನವನ್ನು ಕಂಡಿತು.

* * * *

ಹನ್ನೆರಡನೆಯ ದಿವಸವಾದ ಮೇಲೆ ದೇಸಾಯರು ಕಿಟ್ಟಿಯನ್ನು ಮನೆಗೆ ಕರೆದು ರಾಘಪ್ಪ ತಮಗೆ ಕಳಿಸಿಕೊಟ್ಟ ಪತ್ರವನ್ನು ತೋರಿಸಿದರು.

ಕ್ಷೇಮ. ಶ್ರೀ. ಧಾರವಾಡ

ರಾ|| ರಾ|| ಬಹದ್ದೂರದೇಸಾಯರಿಗೆ ರಾಘಪ್ಪನ ಸ. ವಿ. ವಿ. ನಾನು ನಿಮ್ಮ ಪ್ರೀತಿಗಾಗಿ ಈ ಎರಡು ಮಾತುಗಳನ್ನು ನಿಮ್ಮೆದುರು ಇಟ್ಟಿದ್ದೇನೆ. ನನಗೆ ಅಪಜಯವೆಂದರೆ ಬಹಳ ಹೆದರಿಕೆ. ಆದರೆ ನಾನು ಸೋತದ್ದು ನಿಮಗಲ್ಲ ಎಂಬುದಿಷ್ಟನ್ನೇ ನಾನು ಇಲ್ಲಿ ನಿಮಗೆ ತಿಳಿಸಬೇಕಾಗಿದೆ. ಏಕೆಂದರೆ ನೀವು ನಿಮ್ಮ ಮಗನ ಪತ್ರಗಳನ್ನು ನನ್ನ ಕಡೆಗೆ ಕಳಿಸಿ ಹೆದರಿಸಲು ಯತ್ನಿಸಿದಿರಿ. ನಾನು ಹೆದರಿದೆನೆಂದೇ ನಿಮ್ಮ ಕಲ್ಪನೆಯಾಗಿದ್ದರೆ ಅದನ್ನು ಬಿಟ್ಟುಬಿಡುವದು ಒಳ್ಳೆಯದು. ಅದು ನಿಜವಲ್ಲವೆಂಬುದನ್ನು ಈಗ ಸಿದ್ಧಮಾಡಿ ತೋರಿಸುತ್ತೇನೆ. ನಾನು ನಿಮಗೆ ದುಷ್ಟನಂತೆ ತೋರಿದುದರ ಬಗ್ಗೆ ನನಗೆ ಬಹಳ ದುಃಖವಿಲ್ಲ. ನಾನು ನನ್ನದೇ ಆದ ನಿಯಮಗಳಂತೆ ನಡೆದವನು. ಆದರೆ ಯಾವ ಅಳುಕು ಇಲ್ಲದೇ, ಪಾಪಪುಣ್ಯಗಳನ್ನು ಮೀರಿ ನಿಂತವನಂತೆ ಸಮದೃಷ್ಟಿಯಿಂದ ನಾನು ನನ್ನ ಕೃತಿಗಳನ್ನು ನೋಡುತ್ತಿದ್ದೆನು. ಅದೀಗ ಹೊರಟುಹೋದದ್ದೇ ನನಗೆ ಮುಖ್ಯ ವ್ಯಸನವನ್ನುಂಟುಮಾಡಿದೆ. ನನಗೂ ಸದಸದ್ವಿವೇಕ ಬುದ್ಧಿಯು ಕಾಡತೊಡಗಿದೊಡನೆ ನನ್ನ ಅರ್ಧ ಜೀವನ ಮುಗಿದಂತಾಯಿತು. ನಾನು ಮೊದಲಿದ್ದಂತೆ ಒಂದಿಷ್ಟೂ ಭಯವಿಲ್ಲದ ಕಾರ್ಯಸಾಧಕನೇ ಆಗಿ ಉಳಿದಿದ್ದರೆ

ಇನ್ನು ಮುಂದೆ ನಡೆಯುವ ಸಂಗತಿ ನಡೆಯುತ್ತಿರಲಿಲ್ಲವೆಂಬುದು ಖಂಡಿತ. ಆದರೆ ನನಗೆ ಹೀಗೆ ಅಂತರಾತ್ಮನ ಕಾಟ ಸುರುವಾಗುವ ಕಾಲಕ್ಕೇ ನೀವು ನಿಮ್ಮ ಮಗನ ಪತ್ರಗಳನ್ನು ನನ್ನ ಕಡೆಗೆ ಕಳಿಸಿ ನನ್ನ ಭೂತಕಾಲದ ಸ್ಮೃತಿಗಳನ್ನು ಜಾಗೃತಮಾಡಿ ನನ್ನನ್ನು ಕೆಳಗೆ ಎಳೆದಿರಿ. ನಾನು ಮೊದಲಿನ ರಾಘಪ್ಪನಾಗಿದ್ದರೆ ನಿಮ್ಮ ಪತ್ರಕ್ಕೆ ನಾನು ಅಳುಕುತ್ತಿರಲಿಲ್ಲ. ಈಗಲೂ ಅಳುಕಲಿಲ್ಲ. ಆ ಪತ್ರಗಳಲ್ಲಿ ನನ್ನನ್ನು ನಾನೇ ನೋಡಿಕೊಂಡು ಅಳುಕಿದೆ, ಇಷ್ಟೆ. ಇಲ್ಲವಾದರೆ ಪತ್ರಗಳ ಬೆಲೆ ಬಹಳ ಇಲ್ಲ.

ಉದಾಹರಣೆ: ನಿಮ್ಮ ಮಗನು ಪುಣೆಗೆ ಹೋಗಲಿ, ಹತ್ತು ವರ್ಷ ಹುಡುಕಾಡಲಿ. ನನಗೆ ಬಾಧೆ ತಟ್ಟುವ ಯಾವ ವಿಷಯವನ್ನೂ ಅವನು ದೊರಕಿಸಲಾರನು. ಅದನ್ನು ನಾನು ನಾನಾಗಿಯೇ ನಿಮಗೆ ಬರೆದು ತಿಳಿಸುತ್ತಿದ್ದೇನೆ. ಅಂದರೆ ನಿಮಗೆ ಸತ್ಯವೂ ತಿಳಿಯುತ್ತದೆ; ನಾನು ನಿಮಗೆ ಹೆದರುವ ಕಾರಣವಿದ್ದಿಲ್ಲ ಎಂಬುದೂ ತಿಳಿಯುತ್ತದೆ. ಅಲ್ಲದೆ ನನ್ನ ಅವಗುಣಗಳೊಂದಿಗೆ ಒಂದೆರಡು ಒಳ್ಳೆಯ ಗುಣಗಳೂ ಇದ್ದವೆಂಬುದು ಗೊತ್ತಾಗಬಹುದು.

ನಮ್ಮ ಪಿತ್ರಾರ್ಜಿತ ಹೊಲಗಳೆಲ್ಲ ತಂದೆಯವರ ಕಾಲದಿಂದಲೇ ಒತ್ತಿ ಬಿದ್ದು ನಾವು ಸ್ವಂತ ಪ್ರಯತ್ನದಿಂದ ನಾಲ್ಕು ಪುಸ್ತಕ ಧಾರವಾಡದಲ್ಲಿ ಕಲಿತೆವು. ನನಗೆ ಇತ್ತ ನೌಕರಿ ಸಿಗಲಿಲ್ಲವಾದ್ದರಿಂದ ಪುಣೆಗೆ ನನ್ನ ತಮ್ಮ ವೆಂಕಾಟೆಯ ಬಳಿಗೆ ಹೋದದ್ದು ನಿಮ್ಮ ಮಗನ ಪತ್ರದಿಂದ ನಿಮಗೆ ಗೊತ್ತು ಆಗಿಯೇ ಇದೆ. ಆಗ ನನ್ನ ಲಗ್ನವಾಗಿ ಎರಡು ಮೂರು ವರ್ಷಗಳಾಗಿದ್ದವು. ಕೆಲವೊಂದು ಪ್ರಸಂಗದ ಮೂಲಕ (ಅವು ನಿಮಗೆ ಗೊತ್ತಿದ್ದರೂ ಇರಬಹುದು.) ನಾನು ನೌಕರಿ ಹಿಡಿದು ನನ್ನ ಕಾಲಮೇಲೆ ನಿಲ್ಲುವದಕ್ಕಿಂತ ಮೊದಲೇ ನನ್ನ ಲಗ್ನವಾಗಬೇಕಾಗಿ ಬಂದಿತು. ಲಗ್ನವಾದ ವರ್ಷಕ್ಕೆ ನಮ್ಮ ರತ್ನಾ ಹುಟ್ಟಿದಳು. ಪ್ರಾಪ್ತಿಯಾದರೊ ಬಹಳ ಕಡಿಮೆ. ಹೀಗೆ ಬಹಳ ಕಂಗಾಲ ಸ್ಥಿತಿಯಲ್ಲಿ ಪುಣೆಗೆ ನಾನು ನೌಕರಿ ಹುಡುಕಲು ಹೋದೆನು. ಪುಣೆಯಲ್ಲಿ ಅತ್ತಿತ್ತ ಕಚೇರಿ, ಬ್ಯಾಂಕು ಎಂದು ನೌಕರಿಗಾಗಿ ಅಲೆದಾಡುವದು, ಜಾಹೀರಾತುಗಳಿಗಾಗಿ ವೃತ್ತಪತ್ರ ಓದುವದು,— ಇವೇ ಕೆಲಸಗಳಲ್ಲಿ ಒಂದು ವಾರ ಕಳೆಯಿತು. ಯಾವ ನೌಕರಿಯ ಆಶೆ ಸಿಗಲಿಲ್ಲ. ವೆಂಕಟರಾಯನಂತೆ ಸಿಪಾಯಿಯಾಗುವದು ನನಗೆ ಸಾಧ್ಯವೇ ಇರಲಿಲ್ಲ.

ವೆಂಕಾಟೆ ಚೆಕ್ಕು ಮುರಿಸಿಕೊಂಡು ಬಂದ ಮರುದಿವಸದ ಮುಂಜಾನೆಯ

ವರ್ತಮಾನಪತ್ರದಲ್ಲಿ ನಾನು ತಾಜೀಮುದ್ದೀನ ಡ್ರಾಯಿವ್ಹರನ ಬಗ್ಗೆ ಒಂದು ಸುದ್ದಿಯನ್ನು ಓದಿದೆನು. ಅವನು ಲಕ್ಷ್ಮೀರೋಡಿನ ಮೇಲೆ ಒಬ್ಬ ಮುದುಕನ ಮೇಲೆ ಮುನ್ನಾದಿನ ಮೋಟಾರು ಹಾಯಿಸಿದ್ದನೆಂದೂ, ಅದಕ್ಕಾಗಿ ಪೋಲೀಸರು ಅವನನ್ನು ಸೆರೆಹಿಡಿದಿದ್ದರೆಂದೂ ವರ್ತಮಾನಪತ್ರದ ಒಂದು ಮೂಲೆಯಲ್ಲಿ ಪ್ರಕಟವಾಗಿತ್ತು. ವೆಂಕಟರಾಯ ವರ್ತಮಾನಪತ್ರದವನಲ್ಲ. ಅಲ್ಲದೆ ತಪ್ಪಿತಪ್ಪಿ ನೋಡಿದರೂ ಮೂಲೆಯಲ್ಲಿ ಮುದ್ರಿತವಾದ ಸುದ್ದಿಯನ್ನು ಓದುವದೂ ಅಸಂಭವ. ಆದ್ದರಿಂದ ಈ ಅಪಘಾತದ ಸುದ್ದಿ ವೆಂಕಟರಾಯನಿಗೆ ತಿಳಿಯುವದೇ ಅಸಾಧ್ಯ. ಅಲ್ಲದೆ ಸಂಧಿ ಸಾಧಿಸುವಾಗ ತುಸು ಎದೆಗಾರರಾಗಿರಲೇಬೇಕು. ಈ ಸುಸಂಧಿಯನ್ನು ಹೊಟ್ಟೆಗಾಗಿ ಕಂಗಾಲನಾದ ನಾನು ಕಳೆದುಕೊಳ್ಳಲಿಲ್ಲ. ವೆಂಕಾಟಿ ಪೂಜೆಗೆ ಕುಳಿತಾಗ ತಾಜೀಮುದ್ದೀನ ಬಂದಿದ್ದಾನೆಂದು ಹೇಳಿ ಅವನ ಕೈಯಿಂದ ಕೀಲಿಕೈ ಪಡೆದು ಎರಡು ಸಾವಿರ ರೂಪಾಯಿ ನಾನೇ ಎತ್ತಿದೆನು. ನಿಮಗೆ ಹೆಂಡಿರುಮಕ್ಕಳನ್ನು ಉಪವಾಸ ಕೆಡವುವ ಅನುಭವ ಬಾರದಿರಲಿ. ಆದರೆ ಆ ಅನುಭವವುಳ್ಳವರ ಕೃತಿಗಳನ್ನು ನೀವು ಅನಾದರದಿಂದ ನೋಡ ಬಾರದು.

ಆದರೆ ಚೆಕ್ಕು ಖೊಟ್ಟಿಯಾಗಿರಬಹುದೆಂದು ನನಗೂ ಕಲ್ಪನೆಯಿಲ್ಲ; ವೆಂಕಟರಾಯನಂತೂ ಅಷ್ಟಕ್ಕೆ ಅದನ್ನು ಮರೆತೇಬಿಟ್ಟನು. ನಾನು ಹಿಂತಿರುಗಿ ಧಾರವಾಡಕ್ಕೆ ಬಂದೆ.... ಒಂದು ವಾರದಲ್ಲಿ ವೆಂಕಾಟಿಯ ಪತ್ರ ಬಂದಿತು. ಚೆಕ್ಕು ಖೊಟ್ಟಿ ಇತ್ತೆಂದೂ, ಅದಕ್ಕಾಗಿ ಪೋಲೀಸರು ಒಂದು ಅವನನ್ನು ಸೆರೆ ಹಿಡಿದಿದ್ದಾರೆಂದೂ ತಿಳಿಯಿತು. ಪುಣೆಗೆ ಹೋಗುವಾಗ ಇಲ್ಲಿಯ ವಕೀಲರನ್ನು ಕೇಳಿಕೊಂಡು, ಹೇಗಾದರೂ ವೆಂಕಾಟಿ ಜೇಲಿನೊಳಗೆ ಹೋಗದಂತೆ ಜಾಮೀನು ಕೊಡಿಸಲು ಬೇಕಾಗುವ ಕಾಗದ ಪತ್ರಗಳ ತಯಾರಿ ಮಾಡಿಕೊಂಡೆನು. ನನ್ನ ಬೀಗ ಸ್ವಾಮಿರಾಯನು ಎದೆಗಾರನಾಗಿ ಆಗ ಜಾಮೀನು ಕೊಡಲು ಮುಂದೆ ಬಂದನು. ನನಗೆ ಜಾಮೀನು ಕೊಡಲು ಬರುವಂತಿರಲಿಲ್ಲ. ಏಕಂದರೆ ನನ್ನ ಹೊಲಗಳೆಲ್ಲ ಒತ್ತಿಯಲ್ಲಿದ್ದವು. ಬಳಿಯಲ್ಲಿದ್ದ ಎರಡು ಸಾವಿರ ರೂಪಾಯಿಗಳು ಹಾಗೆ ಬಂದವುಗಳು. ಅಂತೂ ಸ್ವಾಮಿರಾಯನನ್ನು ಕರಕೊಂಡೇ ಪುಣೆಗೆ ಹೋಗಿ ವೆಂಕಾಟಿಯನ್ನು ಬಿಡಿಸಿಕೊಂಡು, ಸ್ವಾಮಿರಾಯನನ್ನು ಐದು ಸಾವಿರ ರೂಪಾಯಿಗಳಿಗೆ ಜಾಮೀನು ಮಾಡಿದೆವು. ಮೂವರೂ ತಿರುಗಿ ಧಾರ-

ಮಾಡಕ್ಕೆ ಬಂದೆವು. ವೆಂಕಾಟಿ ಸ್ವಾಮಿರಾಯನ ದೇಖರೇಖಿಯ ಕೆಳಗೆ ಅವರ ಮನೆಯಲ್ಲಿ ಇರತೊಡಗಿದನು.

ಆದರೆ ಹೊರಗೆ ಧೀರನಾಗಿ ಸ್ವಾಮಿರಾಯ ತೋರಿದರೂ ವೆಂಕಾಟಿಯ ವಿಕ್ಷಿಪ್ತ ಸ್ವಭಾವಕ್ಕೆ ಅವನು ಒಳಗಿಂದೊಳಗೆ ಹೆದರಿರಬೇಕು. ಏಕಂದರೆ ನನಗೆ ತಿಳಿಸದೆ ಮೊದಲು ವೆಂಕಾಟಿಗೆ 'ನಿನ್ನ ಬೋಜೆ ಹೊತ್ತಿದ್ದೇನೆ. ನಿನ್ನ ಪಾಲಿನ ಆಸ್ತಿ ಬರೆದುಕೊಡು.' ಎಂದು ಕಾಡಹತ್ತಿದನೆಂದು ತೋರುತ್ತದೆ. ಕೊನೆಗೊಮ್ಮೆ ನಿಮ್ಮ ಕೈಗೆ ಸಿಕ್ಕ ಬಕ್ಷೀಸುಪತ್ರವನ್ನು ತಯಾರಿಸಿ ಸ್ವಾಮಿರಾಯ ವೆಂಕಾಟಿಯ ಸಹಿಯನ್ನು ತೆಗೆದುಕೊಳ್ಳಲು ಯತ್ನಿಸಲಾಗಿ ವೆಂಕಾಟಿ 'ನನ್ನ ಅಣ್ಣ ಮಾಡಿದರೆ ನಾನು ಸಹಿ ಮಾಡುತ್ತೇನೆ' ಎಂದು ಮೊಂಡತನ ಮಾಡಿದನು. ಆಗ ಸ್ವಾಮಿರಾಯ ನನ್ನನ್ನು ಕರೆಸಿಕೊಂಡು, 'ನಿನ್ನ ಆಸ್ತಿಯ ಆಶೆಗಾಗಿ ಅಲ್ಲ; ಇವನ ಸ್ವಭಾವಕ್ಕಾಗಿ ನಾನು ಇದನ್ನು ಬೇಡುತ್ತೇನೆ. ಐದು ಸಾವಿರ ಎಂದರೆ ಸಣ್ಣ ಗಂಟು ಅಲ್ಲ.' ಎಂದು ಹೇಳಿದನು. ನನಗೂ ಅದು ಸರಿ ಕಂಡಿತು. ಅದಕ್ಕೆ ಸಹಿ ಮಾಡಿದೆನು. ನಾನು ಮಾಡಿದುದನ್ನು ಕಂಡ ಮೇಲೆ ವೆಂಕಾಟಿಯೂ ಸಹಿ ಮಾಡಿದನು.

ಆದರೆ ವೆಂಕಾಟಿಯ ಚಡಪಡಿಕೆ ಮುಗಿಯಲಿಲ್ಲ. ವೆಂಕಾಟಿ ಒಂದು ತರಹದವನು. ಈಗ ಏಕೆ ಹೊಲಮನೆಯೆಂಬ ಹವ್ಯಾಸ ಅವನಲ್ಲಿ ಹೊಕ್ಕಿತ್ತೋ ಏನೊ, 'ನನಗೆ ವಂಚನಾ ಮಾಡಿದಿರಿ. ನನ್ನ ಆಸ್ತಿ ಕಸಿದುಕೊಂಡಿರಿ' ಮುಂತಾಗಿ ದಿನಬೆಳಗಾದರೂ ಕೂಗಾಡತೊಡಗಿದನು. ನಾನೇನೂ ನಿಮ್ಮ ಮಗ ತರ್ಕಿಸಿಕೊಂಡಂತೆ, ಅವನಿಗೆ ಹಟ ಮಾಡಲು ಕಲಿಸಿಕೊಡಲಿಲ್ಲ. ಆದರೆ ಒಂದು ದಿನ ಸಿಟ್ಟಿನಿಂದ ಸ್ವಾಮಿರಾಯ ಬಕ್ಷೀಸುಪತ್ರವನ್ನೇ ಪ್ರತಿಯೆಂದು ತಿಳಿದು ಬೀಸಾಡಲಾಗಿ ವೆಂಕಾಟಿ ಅದನ್ನು ತೆಗೆದುಕೊಂಡು ನಮ್ಮ ಮನೆಗೆ ಬಂದನು. ಅದನ್ನು ವಕೀಲರಿಗೆ ತೋರಿಸಿ ತನ್ನ ಆಸ್ತಿ ತನಗೆ ಬಿಡಿಸಿಕೊಡಬೇಕೆಂದು ಎದೆ ಎದೆ ಬಡಕೊಳ್ಳತೊಡಗಿದನು. ನಾನು ಅವನಿಗೆ ನಾಳೆ ವಕೀಲರತ್ತ ಹೋಗೋಣವೆಂದು ಸಮಾಧಾನ ಹೇಳಿದೆನು. ಆ ಕಾಗದವನ್ನು ನೋಡಿದೊಡನೆ ಅದು ಪ್ರತಿಯಲ್ಲ, ಮೂಲ ಬಕ್ಷೀಸುಕಾಗದವೇ ಎಂದು ನನಗೂ ತಿಳಿಯಿತು. ಆಶ್ಚರ್ಯದ ಮೂಲಕವೋ ವೆಂಕಾಟಿಯ ಕಾಟದ ಮೂಲಕವೋ ನನ್ನಿಂದ ಒಂದು ತಪ್ಪು ಮಾತು ಹೊರಟಿತು. 'ನೀನು ಯಾಕೆ ಚಿಂತೆ ಮಾಡುತ್ತೀ ? ಮೂಲಬಕ್ಷೀಸು

ಕಾಗದವನ್ನೇ ನಿನ್ನ ಕಡೆಗೆ ಕೊಟ್ಟಿದ್ದಾನೆ. ನೀನು ತಿರುಗಿ ಕೊಡಬೇಡ, ಅಂದರೆ ನಿನ್ನ ಆಸ್ತಿ ನಿನಗೇ ಆಗುತ್ತದೆ' ಎಂದು ನಾನು ಹೇಳಿದನು. ಆ ವಿಕ್ಷಿಪ್ತನು ತೋರಿಕೆಗೆ ಸಮಾಧಾನಗೊಂಡಂತೆ ಕಂಡಿತು. ರಾತ್ರಿ ಊಟವಾಯಿತು. ನನ್ನ ದುರ್ದೈವ, ನಾನು ಅವನಿಗೆ ನಮ್ಮಲ್ಲಿಯೇ ಊಟಕ್ಕೆ ಹಾಕಿ ಮಲಗಲು ಇಟ್ಟು ಗೊಂಡದ್ದು. ಅಂದು ರಾತ್ರಿ ಯಾರೋ ಊರವರು ಬಂದು ಬಾಗಿಲು ತಟ್ಟ ತೊಡಗಿದೊಡನೆ ವೆಂಕಾಟಿ 'ಅಯ್ಯಯ್ಯೊ, ಪೋಲೀಸರು ಬಂದರು ! ನನ್ನನ್ನು ಹಿಡಿಯುತ್ತಾರೆ' ಎನ್ನುತ್ತ ಹಿತ್ತಿಲ ಕಡೆಗೆ ಓಡಿದನು. ನಾನು, 'ಎಲ್ಲಿ ಹೋಗು ತ್ತಾನೆ.' ಎಂಬ ವಿಚಾರದಿಂದ ಮಾನಸಿಕ ಮಾಡಿ ಬಂದವರ ಉಪಚಾರದಲ್ಲಿ ತೊಡಗಿದೆ. ಆದರೆ ಆಗ ಹೋದ ವೆಂಕಾಟಿಯ ಸುದ್ದಿ ನಂತರ ನಿಮ್ಮ ಪತ್ರದ ಮುಖಾಂತರವೇ.

ವೆಂಕಾಟಿಯ ವಿಷಯದಲ್ಲಿ ಕಲ್ಪನೆ ಹಾಗು ಸತ್ಯ ಇವು ಬೇರೆ ಬೇರೆ ವಿಷಯಗಳಲ್ಲ. ಕೈಗೆ ಮೂಲಬಕ್ಷೀಸುಪತ್ರ ಸಿಕ್ಕದ್ದಕ್ಕಾಗಿ ಸುಳ್ಳೇ ಹಾಗೆ ಓಡಿ ಹೋದನೋ, ಅಥವಾ ನಿಜವಾದ ಪೋಲೀಸರೇ ಎಂಬ ಕಲ್ಪನೆಯನ್ನು ನಂಬಿ ಹೋದನೋ ನನಗೂ ತಿಳಿಯದು. ಎರಡೂ ಸಾಧ್ಯವಿದೆ. ಪರಿಣಾಮ: ನನ್ನ ಅಕ್ಕನ ಮನೆಯೇ ಬರಿದಾಯಿತು; ಅಕ್ಕ ವಿಧವೆಯಾದಳು; ಅದರ ಅಪವಾದ ನನ್ನ ಮೇಲೆ ಬಂದಿತು. ನಾನಾಗಿಯೇ ನನ್ನ ಅಕ್ಕನ ಗಂಡನನ್ನು ಹಾಳುಮಾಡ ಬೇಕೆಂಬ ಉದ್ದೇಶದಿಂದ ಇದನ್ನು ಮಾಡಿದ್ದರೆ ನನಗೆ ದುಃಖವಾಗುತ್ತಿರಲಿಲ್ಲ. ಕೂಸಿನ ಬಾಯಲ್ಲಿ ಮೊಲೆಯಿಟ್ಟು ನಿದ್ದೆಹೋದ ತಾಯಿ ಎದ್ದು ನೋಡುವಷ್ಟ ರಲ್ಲಿ ಕೂಸು ಉಸಿರುಗಟ್ಟಿ ಪ್ರಾಣಬಿಟ್ಟ ಸಂಗತಿಗಳನ್ನು ನೀವು ಕೇಳಿದ್ದೀರಾ?.... ಹಾಗೆ ಆಯಿತು ನನ್ನ ಸ್ಥಿತಿ. ನಾನು ಅಶಕ್ತನಾದ ವೇಳೆಗೆ ಇವೆಲ್ಲ ನನ್ನ ಕಣ್ಣೆ ದುರು ಕಟ್ಟತೊಡಗಿದವು. ಆ ನನ್ನ ಮಾತು, ಆ ಎರಡು ಸಾವಿರ ರೂಪಾಯಿಗಳು, ಕರ್ಮದಂತೆ ನನ್ನನ್ನು ಬೆನ್ನು ಹತ್ತಿದವು. ಸ್ವಾಮಿರಾಯ ಇದ್ದ ಆರು ತಿಂಗಳಲ್ಲಿ ಅವನ ಸ್ನೇಹವೂ ಹೋಯಿತು. ಅವನೂ ನವೆದು ನವೆದು ಸತ್ತುಹೋದನು. ಮನೆಯಂತೂ ತೊಳೆದು ಹೋಗಿತ್ತು. ಆ ಎರಡು ಸಾವಿರ ರೂಪಾಯಿಗಳ ಬೆಂಬಲವಿದ್ದ ನಾನು ಏನನ್ನಾದರೂ ಮಾಡೇನೆಂದರೆ ಗಂಗಕ್ಕ ನನ್ನನ್ನು ನಾಯಿ ಯಂತೆ ದೂರವಿಟ್ಟಳು. ನನ್ನ ಮನೆಯೊಳಗಿಂದ ವೆಂಕಾಟಿ ಕಣ್ಮರೆಯಾದದ್ದೇ ಅವಳ ದ್ವೇಷಕ್ಕೆ ಸಾಕಷ್ಟು ಕಾರಣವಾಯಿತು.

ಅಕ್ಕನಿಗೆ ಮುಖ ತೋರಿಸಲು ಆಗದ್ದಕ್ಕೆ ಹಳ್ಳಿಗೆ ಹೋಗಿ ಇರತೊಡಗಿದೆನು. ನನ್ನ ಹೊಲಗಳನ್ನು ಒತ್ತಿಯಿಂದ ಬಿಡಿಸಿಕೊಂಡು ಕವಿುತ ಪ್ರಾರಂಭಿಸಿದೆನು. ಮನೆಯಿಂದ ಸ್ಥಿತಿವಂತನೂ ಆದೆನು. ಖಂಬೀರವಾಗಿ ಬಾಳಿ ಜೀವನವನ್ನು ಹಿಡಿತಕ್ಕೆ ತಂದೆನು. ಇನ್ನೊಮ್ಮೆ ಸೋಲು ಎಂಬುದನ್ನು ಕಾಣಬಾರದಾದರೆ ನಾನೇ ಮುಂದುವರಿದು ಕೆಲಸ ಕೈಕೊಂಡು, (ಅದು ಎಂಥದೇ ಇರಲಿ), ಅದರಲ್ಲಿ ದಮುಮಾಣವಾಗಿ ಅದನ್ನು ನಿರ್ದೋಷವಾಗಿ ಪೂರ್ಣಗೊಳಿಸುವದೇ ಒಂದು ಉಪಾಯುವೆಂಬ ತತ್ತ್ವವನ್ನು ಹಿಡಿದೆನು. ಕೆಲಸ ಸಾಧಿಸಿ ಸೋಲನ್ನು ಗೆಲ್ಲುವವನು ಹೆದರಿಕೆ ನಾಚಿಕೆ ಮುಂತಾದ ಎಲ್ಲ ವಿಕಾರಗಳನ್ನೂ ಬಿಡಬೇಕು ಎಂದು ನಂಬಿ, ನಾನು ಮಾಡುವ ಕೆಲಸಗಳಲ್ಲಿಯ ನೀತಿ ಅನೀತಿಯ ವಿಚಾರವನ್ನು ತೆಗೆದು ಹಾಕಿದೆನು. ಆದದ್ದನ್ನು ನಿರ್ವಿಕಾರವಾಗಿ ನೋಡುತ್ತ ಕೆಲಸ ಪೂರ್ಣಗೊಳಿಸುವದೇ ನನ್ನ ನಿತ್ಯದ ರೀತಿಯಾಯಿತು. ನನಗೆ 'ಭರಾರಿ' ಎಂಬ ಬಿರುದು ಬಂದಿತು.

ಧಾರವಾಡಕ್ಕೆ ತಿರುಗಿ ಬಂದ ಮೇಲೆ ಎಲ್ಲ ಉಪಾಯುಗಳನ್ನು ಮಾಡಿ ಚಿ|| ಕೃಷ್ಣನಿಗೆ ನನ್ನ ಮಗಳನ್ನು ಕೊಟ್ಟೆನು. ನನ್ನ ಅನೇಕ ಉದ್ದೇಶಗಳಲ್ಲಿ ಗಂಗಕ್ಕನೊಡನೆ ಒಂದಾಗಿ ಹಳೆಯ ಕತೆಯನ್ನು ಅಷ್ಟಕ್ಕೆ ಮುಗಿಸುವ ಉದ್ದೇಶವೂ ಒಂದಾಗಿತ್ತು. ಆದರೆ ಆಕೆಯ ಹಟ ಅಭಿಮಾನಗಳು ನನ್ನ ದುಷ್ಟತನಕ್ಕೆ ಆವ್ಹಾನವಾಗಿ ಬಂದವು. ಆಕೆಯ ತಿರಸ್ಕಾರವು ನನ್ನಲ್ಲೂ ಹಟವನ್ನು ಹೊಗಿಸಿತು. ಆಕೆಯನ್ನು ಮೀರಿ ಈ ಲಗ್ನವನ್ನು ಮಾಡಿಸಿದೆನು. ಆ ಲಗ್ನಕ್ಕೆ ನಿಮ್ಮನ್ನೂ ಒಳಗೆ ಹಾಕಿಕೊಂಡೆನು. ಮೋಸವಾಯಿತೆಂದು ಒಮ್ಮೆಯೂ ನಿಮಗೆ ಅನಿಸಿರಲಿಕ್ಕಿಲ್ಲವೇ?

ಇನ್ನು ನನಗಾದ ಎರಡನೆಯ ಅಪಜಯ. ವರದಕ್ಷಿಣೆಗೆ ಹಣ ಕಡಿಮೆಯಾಗುವದೆಂದು ಮೊದಲೇ ಗೊತ್ತಿತ್ತು. ಚಿ|| ಕಿಟ್ಟಣ್ಣನ ಹಣ ನಿಮ್ಮ ಬಳಿಗೆ ಇದ್ದದ್ದು ತಿಳಿದುದರಿಂದ ನಿಮ್ಮ ಕೈ ಕಟ್ಟಲೆಂದು ಐದುನೂರು ರೂಪಾಯಿ ಕಡಿಮೆ ಇದ್ದದ್ದನ್ನು ಹಾಗೆಯೇ ಸಾಗಿಸುವ ನನ್ನ ಯೋಚನೆಗೆ ನೀವು ಸಿಗಬೇಕಿಲ್ಲವಾದರೂ ನೀವು ನನ್ನನ್ನು ಹೊಗಳದಿರಲಾರಿರಿ. ಆದರೆ ಒಂದು ಮಾಡಲಿಕ್ಕೆ ಹೋಗಿ ಇನ್ನೊಂದಾಯಿತು. ನನಗೆ ಇಷ್ಟವಾದ ಇನ್ನೊಂದು ಜೀವವು ಆ ಐದುನೂರು ರೂಪಾಯಿ ತುಂಬುವ ಹವ್ಯಾಸಕ್ಕೆ ನನಗೆ ಅರಿಯದೆಯೆ ಬಿದ್ದು,

ಈ ಲೋಕಕ್ಕೆ ಎರವಾಯಿತು. ಆ ನೋವು ನನಗೆ ಇನ್ನೂ ಇದೆ. ನನ್ನ ಇಳಿಗಾಲದ ಈ ಎರಡನೆಯ ಸೋಲು ನನ್ನನ್ನು ನಿರ್ವಿಣ್ಣವಾಗಿ ಮಾಡಿತು. ಇನ್ನೂ ಮಾಡುತ್ತಿದೆ. ಮೆಹಬೂಬಜಾನಳ ಮರಣದ ದುಃಖ ನಿಮ್ಮಂಥ ಆತ್ಮಸಂಭಾವಿತರಿಗೆ ತಿಳಿಯಲಿಕ್ಕಿಲ್ಲ. ಆದರೆ ನನ್ನನ್ನು ಮಾತ್ರ ಮೂರು ತಿಂಗಳಲ್ಲಿ ಅದು ವೃದ್ಧಾಪ್ಯಕ್ಕೆ ತಂದಿತು. ನನ್ನ ಕೆಲಸದ ಹಿಡಿತವನ್ನೇ ಕೆಡಿಸಿತು. ನಾನು ಬೇರೆ ರಾಘಪ್ಪನಾದೆನು. ನನ್ನ ಮುಷ್ಟಿ ಸಡಿಲಿಸಿತು.

ನೀರಿನಲ್ಲಿ ಕಲ್ಲು ಒಗೆದು ಅದೇ ದಿಕ್ಕಿನಲ್ಲಿ ತೆರೆಗಳು ಹೋಗಲಿಯೆಂದರೆ ತೆರೆಗಳು ಕೇಳುತ್ತವೆಯೇ ?.... ನಾನು ಕವಿಯಂತೆ ಮಾತಾಡುತ್ತಿಲ್ಲ. ನನ್ನ ಅನುಭವಗಳ ಸಾರವಾಗಿ ನಮ್ಮ ಕರ್ಮಗಳ ರೂಪಕವಾಗಿ ಈ ಪ್ರಶ್ನೆ ನನ್ನ ಮುಂದೆ ಸತತವಾಗಿ ಈ ನಾಲ್ಕುವರ್ಷ ನಿಂತಿದೆ. ಕಲ್ಲು ಒಗೆದ ಮೇಲೆ ತೆರೆಗಳು ಎತ್ತ ಏಳುತ್ತವೆಯೆಂಬುದನ್ನು ಅರಿಯಲಾರದ, ತೆರೆಗಳನ್ನು ತಡೆಯಲಾರದ ನಾವು ಕಲ್ಲು ಏಕೆ ಒಗೆಯುತ್ತೇವೆ ?....ಒಂದು ಮಾಡಲಿಕ್ಕೆ ಹೋಗಿ ಇನ್ನೊಂದು ಆದರೆ ಅದಕ್ಕೆ ಹೊಣೆ ಯಾರು ?....ಅನುಭವಿಸುವವರು ಯಾರು ?.... ನಾನು ಅನುಭವದ ಮಾತು ಹೇಳುತ್ತಿದ್ದೇನೆ, ವೇದಾಂತದ ಮಾತನ್ನು ಅಲ್ಲ. ಆದರೆ ಅನುಭವವೇ ವೇದಾಂತದತ್ತ ಜಗ್ಗುತ್ತದೆ. ಹೀಗೆ ಮೆತ್ತಗಾದ ನನ್ನ ಮನಸ್ಸು ಹಿಂದೆ ಆದದ್ದನ್ನೆಲ್ಲ ನೆನೆಸಿ ನೆನೆಸಿ ಕಷ್ಟಬಡತೊಡಗಿತು.ನಾನು ಅಶಕ್ತನಾದೆನು. ದೈಹಿಕ ಶಕ್ತಿ ಕುಂಠಿತವಾಗಿಲ್ಲ. ಆದರೆ ಒಂದೇ ಉದ್ದೇಶದತ್ತ ಗುರಿ ಇಟ್ಟು ಶಕ್ತಿ ಹಾಕುವ ಏಕಾಗ್ರತೆ ದಿನದಿನಕ್ಕೆ ನನ್ನಲ್ಲಿ ಕಡಿಮೆಯಾಯಿತು.

ಇದರ ಮುಂದಿನ ಅನುಭವವನ್ನೂ ಕೇಳಿರಿ. ನನಗೆ ಕೆಲಸವೆಂದರೆ ಆಲಸ್ಯವಲ್ಲ, ಭಯ ಸುರುವಾಯಿತು. ಇಂದು ಹೀಗೆ ಮಾಡಹೋಗಿ ಇನ್ನೊಂದು ಏನಾದರೂ ಆದರೆ ಹೊಣೆ ಯಾರು ?.... ಇದೇ ಪ್ರಶ್ನೆ ದಿನದಿನಕ್ಕೆ ತೀವ್ರವಾಗಿ ಭಾಸವಾಗಿ ಕೆಲಸಮಾಡುವಾಗ ಅನಪೇಕ್ಷಿತ ಪರಿಣಾಮಗಳ ಭೀತಿ ಪ್ರಾರಂಭವಾಯಿತು. ಆದರೆ ಕರ್ಮ ಬಿಟ್ಟೀತೇ ? ಕೆಲಸವನ್ನಂತೂ ಮಾಡಲೇಬೇಕು. ಹೀಗಾಗಿ ಮೊದಲಿನಂತೆ ನಾನಾಗಿಯೇ ಯೋಚನೆಮಾಡಿ ಕೆಲಸ ಅಂಗೀಕರಿಸುವದನ್ನು ಬಿಟ್ಟುಬಿಟ್ಟೆನು. ಅದರ ಬದಲು ಪೂರ್ವಸಂಚಿತದ ಪ್ರವಾಹದಲ್ಲಿ ಬಿದ್ದುಕೊಂಡೆನು. ಒಲ್ಲೆ ಒಲ್ಲೆನೆನ್ನುತ್ತಲೆ ಹೊಸಹೊಸ ಆಸೆ ಆಕಾಂಕ್ಷೆಗಳನ್ನು ಬೆಂಬಳಿಸತೊಡಗಿದೆನು. ನನ್ನ ಭೀತಿಯ ವಿಷಯಳಾದ ಅಕ್ಕನಿಗೆ ನನ್ನ ಆಸ್ತಿ ಹತ್ತಬಾರ

ದೆಂಬ ಉದ್ದೇಶದಿಂದ ನನ್ನ ಹೆಂಡತಿಯ ಜೀವವನ್ನೂ ಪಣಕ್ಕೆ ಹಚ್ಚಿ ಮಗ ನನ್ನು ಪಡೆಯಲು ಯತ್ನಿಸಿದೆನು. ನಾನು ಇದರಲ್ಲಿ ಗೆದ್ದಂತೆಯೇ ಆಗಿತ್ತು. ಆದರೆ ದೈವ ನನ್ನ ವಿರುದ್ಧ ಪಣವನ್ನೇ ತೊಟ್ಟಂತಾಗಿತ್ತು. ಉಪಾಯವಿಲ್ಲ.

ಬಲು ಕೆಟ್ಟ ವೇಳೆಗೆ ನೀವು ನನ್ನ ಕಡೆಗೆ ಆ ಪತ್ರಗಳನ್ನು ಕಳಿಸಿಕೊಟ್ಟಿರಿ. ಅವುಗಳಿಗೆ ನಾನು ಹೆದರಿದೆನೆಂದಲ್ಲ. ಪೂರ್ವದ ಸ್ಮರಣೆ ಹೆಚ್ಚು ಸ್ಪಷ್ಟವಾಗಿ ಆಗಿ ನಾನು ಹೆಚ್ಚು ಹೇಡಿಯಾದೆನು. ನನ್ನ ಕೃತಿಯ ಪರಿಣಾಮಗಳ ಅಗನ್ಯ್ಯತೆಯ ಬಗ್ಗೆ ಹೆಚ್ಚು ಭೀತಿ ನನಗೆ ಹುಟ್ಟಿತು. ನಮ್ಮ ಅಕ್ಕನು ನಿಮ್ಮಲ್ಲಿ ಉಪ ವಾಸ ಬಿದ್ದಾಗ ನಿಮ್ಮ ಮಾತಿಗೆ ಹೆದರಿ ನಾನು ನನ್ನ ಮಗಳನ್ನು ಕಳಿಸಿಕೊಡ ಲಿಲ್ಲ. ಗಂಗಕ್ಕನ ಬಗ್ಗೆ ನನ್ನಂಥವನಿಗೂ ಅಂತಃಕರಣವಿದೆ. ಆಕೆ ಕಷ್ಟಬಟ್ಟ ದ್ದನ್ನು ನೋಡಬಲ್ಲೆನು; ಆದರೆ ಆಕೆ ಉಪವಾಸ ಬಿದ್ದದ್ದನ್ನು ನಾನು ನೋಡ ಲಾರೆನು.

ಇನ್ನು ನನ್ನ ಕೊನೆಯ ಸೋಲು. ನನ್ನ ಹೆಂಡತಿಯ ಸಾವು. ಒಮ್ಮೊಮ್ಮೆ ದೇವರು ದುರ್ಬುದ್ಧಿಗೆ ದುರ್ಬುದ್ಧಿಯ ಅತಿಶಯದಿಂದಲೇ ಸುಬುದ್ಧಿ ಕಲಿಸು ತ್ತಾನೆಂದು ಕಾಣುತ್ತದೆ. ನನ್ನ ಹೆಂಡತಿಯನ್ನು ನಾನು ಸಾವಿರ ಬಗೆಯಿಂದ ಪ್ರೀತಿಸಿದ್ದೇನೆ. ಅಷ್ಟು ಅನುಭವ ನಿಮಗೆ ಇರುವದು ಸಾಧ್ಯವಿಲ್ಲ. ಆದರೆ ಸಾವಿರದ ಒಂದನೆಯ ಬಗೆಯೂ ಇರುತ್ತದೆಂಬುದು ಇದೇ ಬಾರಿ ನನ್ನಂಥವನಿಗೂ ಗೊತ್ತಾದದ್ದು. ಆಕೆಗೆ ನಾನು ಅನ್ಯಾಯ ಮಾಡಿದಾಗ, ಆಕೆ ಬೇನೆ ತಿನ್ನುವಾಗ, ಮೂಕತನದಿಂದ ಸಹಿಸುವಾಗ, ಕೊನೆಗೆ ಸತ್ತುಹೋದಾಗ, ಕರುಣೆ, ಮಮತೆ, ಮಾಯೆ ನನ್ನಲ್ಲಿ ಪೂರಪೂರವಾಗಿ ಹರಿಯಿತು. ಅಪಾರವಾದ ಕನಿಕರ, ಸಮುದ್ರ ದಂಥ ಕನಿಕರ, ಸೆಲೆಸೆಲೆಯಾಗಿ ಹರಿಯುವ ಕನಿಕರ !.... ಸಾಧುಸಂತರು ದೇವರನ್ನು ಹೀಗೆಯೇ ಪ್ರೀತಿಸಿದರೋ ಏನೋ ಎಂದು ನನ್ನ ಸಂಶಯ. ಎಷ್ಟು ಕಣ್ಣೀರು ಸುರಿಸಿದರೂ ಮುಗಿಯದ ಕರುಣೆ; ದೇಹಕ್ಕೆ ದೇಹ ಒಂದಾದರೂ ಮುಗಿಯದ ಮಮತೆ;.... ನನ್ನ ಹೆಂಡತಿಯ ಬಗ್ಗೆ ಇಷ್ಟು ಅಪಾರವಾದ ಉನ್ಮತ್ತ ವಾದ ಪ್ರೇಮ ನನ್ನಲ್ಲಿ ಹುಟ್ಟೀತೆಂದು ನಾನು ಎಂದೂ ಎಣಿಸಿರಲಿಲ್ಲ. ನನ್ನ ಮದುವೆ ಕೂಡ ಕ್ಷಣಿಕ ಸುಖದ ಆಶೆಯಿಂದಲೇ ಪ್ರಾರಂಭವಾದದ್ದು.

ಇನ್ನು ಕೊನೆಯ ವಿಷಯ. ನಿಮ್ಮ ಮಗ ವಸಂತ ಗಟ್ಟಿಗಾಳಲ್ಲ. ಹೊಡೆ ತಕ್ಕೆ ಹೆದರಿದನು. ನಿಮಗೆ ತುಸು ಚಿಕ್ಕಪುಟ್ಟ ಹಾನಿಮಾಡಿ ನನಗೆ ಸಮಾಧಾನ

ವಿಲ್ಲ. ಅವನು ಸ್ವಲ್ಪ ಆಳು ಆಗಿದ್ದರೆ ನಿಮಗೆ ನನ್ನ ಕೈಗುಣದ ಪೂರ್ಣ ಅನುಭವ ಬರುತ್ತಿತ್ತು. ನಿಮ್ಮ ಕಣ್ಣೆದುರಿಗೆಯೇ ಅವನಿಗೆ ನನ್ನ ಮಗಳನ್ನು ಕೊಟ್ಟು ಲಗ್ನಮಾಡಿಸಿ ಹಿಸೆಗಾಗಿ ನಿಮ್ಮನ್ನು ಕೋರ್ಟಿನ ಕಟ್ಟೆ ಹತ್ತಿಸದೆ ಬಿಡುತ್ತಿರಲಿಲ್ಲ. ಆದರೆ ನಿಮ್ಮ ವಸಂತನಂಥ ಹುದ್ದರಿಯನ್ನು ಹಿಡಿದುಕೊಂಡು ಆಟವಾಡುವ ನಾನೇ ಅವಿವೇಕಿ.

ನಿಮ್ಮ ವಸಂತನಿಗೆ ನನ್ನ ಮಗಳನ್ನು ಕೊಡಬೇಕೆಂದು ಮಾಡಿದ್ದೆ. ಆದರೆ ನನ್ನ ಹೆಂಡತಿಯನ್ನು ಆಸ್ಪತ್ರೆಗೆ ಹಾಕಿದಾಗ ಅವನೇ ಅವಳನ್ನು ಕದ್ದಿದ್ದಾನೆ. ಸುದ್ದಿಯೂ ನಾಲ್ಕು ದಿನದಲ್ಲಿ ಎಲ್ಲ ಕಡೆಗೂ ಹಬ್ಬುವದರಲ್ಲಿ ಸಂದೇಹವಿಲ್ಲ. ಆದರೆ ಈ ವಿಷಯಕ್ಕೂ ನಾನು ನಿಮಗೆ ಏನೂ ಕೇಳಿಕೊಳ್ಳುವದಿಲ್ಲ. ಇಷ್ಟು ದಿವಸ ನಿಮ್ಮ ದ್ವೇಷ ಸಾಧಿಸಿದ್ದೇನೆ. ಈಗ ನಿಮಗೂ ಒಂದು ಸಂಧಿ ದೊರಕಲಿ. ಅಲ್ಲದೆ, ಇದು ಚಿ|| ಶಾಂತಾಳ ತಪ್ಪು. ನನ್ನ ಹೆಂಡತಿಯನ್ನೂ ನಾನೂ ಕದ್ದವನೇ. ಆದರೆ ನನ್ನ ಹೆಂಡತಿ ಒಲಿದದ್ದು ರಾಘಪ್ಪನಿಗೆ; ನನ್ನ ಮಗಳು ಒಲಿದದ್ದು ವಸಂತನಿಗೆ. ನೆಲ ಮುಗಿಲಿನಷ್ಟು ಅಂತರ. ಆಕೆಯ ಅವಿವೇಕಕ್ಕೆ ಆಕೆಯೇ ಬೆಲೆ ತೆರಬೇಕು. ಬೇಕಾದಾಗ ನನ್ನೊಡನೆ ಬರಲಿ; ಉದಾಹರಣೆಯನ್ನಂತೂ ಹಾಕಿಯೇ ಇಟ್ಟಿದ್ದೇನೆ.

ಆದರೆ ಇಂದು ರಾತ್ರಿ ಎರಡೂವರಿ ಗಂಟೆಗೆ ನಾನು ಕೆಲಸದಿಂದ ನಿವೃತ್ತ ನಾಗುತ್ತೇನೆ. ಅದಕ್ಕೂ ಮೊದಲು ನಾನು ಎಲ್ಲಿಯಾದರೂ ಸೋತಿದ್ದರೆ ಅದು ನಿಮಗೆ ಅಲ್ಲ ಎಂದು ನಿಮಗೆ ಸ್ಪಷ್ಟವಾಗಿ ತಿಳಿಹೇಳುವ ಕೊನೆಯ ಕೆಲಸ ಮಾಡಿರುತ್ತೇನೆ.

ಕೃಪೆಯಿರಲಿ,

ನಿಮ್ಮ ಎದುರು ಆಡಿದ ಹಳೆಯ ಹುದ್ದರಿ,

—ರಾಘಪ್ಪ.

## ೩೭ : ಉಪಸಂಹಾರ ಮತ್ತು ಅಚ್ಯುತನ ಮೂರನೆಯ ಪತ್ರ.

ಪ್ರಿಯ ವಾಚಕರೇ! ಕ್ಷಮೆಯಿರಲಿ. ಪ್ರಸ್ತುತ ಲೇಖಕನು ಹಳೆಯ ತರಹ-ದವನು. ಅವನಿಗೆ ತಾನಾಗಿ ಪಾತ್ರಗಳ ಹಾಗು ಓದುಗರ ನಡುವೆ ಕುಂಟದಾಸನಾಗಿ ಮಧ್ಯಸ್ಥಿಮಾಡುವ ಚಟ ಬಹಳ. ಭಾಷಾಶೈಲಿಯಲ್ಲಿ ಗಳಗನಾಥರ, ನಿರೂಪಣ ಶೈಲಿಯಲ್ಲಿ ಶ್ರೀನಿವಾಸರ ಪರಂಪರೆಯನ್ನು ದೇಶ ಕಾಲಕ್ಕೆ ಅನುಸರಿಸಿ ಯಥಾಶಕ್ತಿ ನಮ್ಮ ಭಾಷೆಯ ಕತೆಕಾದಂಬರಿಗಳು ಕಾಯ್ದುಕೊಳ್ಳಬೇಕೆಂದು ಪ್ರಸ್ತುತ ಲೇಖಕನ ಅರಿಕೆ. ಅದಕ್ಕನುಸಾರವಾಗಿ ಕಾದಂಬರಿಯ ಕೊನೆಯಲ್ಲಿ ಮುಂದೆ ಏನಾಯಿತು ಎಂಬುದನ್ನು ಸ್ವಲ್ಪದರಲ್ಲಿಯೇ ಸೂಚಿಸಿ ಮುಗಿಸಬೇಕೆಂದು ಲೇಖಕನ ಇಚ್ಛೆ. ಲೇಖಕನಿಗೆ ಈ ಪಾತ್ರಗಳಿಗೆ ಕೊನೆಯ ಪ್ರಣಾಮ ಹೇಳುವಾಗ ಬಹಳ ದುಃಖವಾಗುತ್ತಿದೆ. ಕೆಲವು ಪಾತ್ರಗಳು ಲೇಖಕನ ಪುಟ್ಟ ಬುದ್ಧಿಯನ್ನು ಕಳೆದ ಒಂದು ವರ್ಷದ ವರೆಗೆ, ಮೂರು ಪಾತ್ರಗಳು ಕಳೆದ ಎಂಟು ವರ್ಷಗಳ ವರೆಗೆ, ತಮ್ಮ ಕ್ರೀಡಾಭೂಮಿಯನ್ನಾಗಿ ಮಾಡಿಕೊಂಡಿದ್ದವು. ಆದರೆ ಅವುಗಳ ಸ್ನೇಹದ ತಕ್ಕಂತೆ ಅವುಗಳ ಪರಿಚಯವನ್ನು ವಾಚಕರಿಗೆ ಮಾಡಿಕೊಡಲು ಆಗದುದಕ್ಕೆ ಕ್ಷಮೆ ಕೋರುತ್ತೇನೆ. ಕೆಲವು ಪಾತ್ರಗಳು ಪೂರ್ಣ ಅರಳಿಲ್ಲ. ಕೆಲವು ಮೋಹಕವಾದಾಗ್ಯೂ ತೀರ ಕಡಿಮೆ ಪ್ರಸಂಗದಲ್ಲಿ ಎದುರಾಗಬೇಕಾಗುತ್ತವೆ. ಆದರೆ ಅವೆಲ್ಲವುಗಳ ಬೆನ್ನು ಹತ್ತಿ ಅವುಗಳ ಸುಖದುಃಖಗಳನ್ನು ತಿಳಿದುಕೊಂಡು ಇದೇ ಕಾದಂಬರಿಗೆ ಜೋಡಿಸುತ್ತ ಹೋದರೆ ಕಾದಂಬರಿ ಬೆಳೆದು ಮಹಾಕಾದಂಬರಿಯಾಗುವ ಭಯ. ಅದರ ಬಗ್ಗೆ ವಾಚಕರ ಕ್ಷಮೆಯನ್ನು ಲೇಖಕನು ಕೋರುವ ಕಾರಣವಿಲ್ಲ. ತಿರುಗಿ ಕೇಳಿದರೆ 'ಸದ್ಯ ಇಷ್ಟಕ್ಕೆ ಮುಗಿಯಿತಲ್ಲಾ' ಎಂದು ಸಂತೋಷದಲ್ಲಿ ವಾಚಕರೇ ಲೇಖಕನಿಗೆ ಹರಸಬೇಕು. ಇಪ್ಪತ್ತನೆಯ ಶತಮಾನದ ಮಧ್ಯಭಾಗದಲ್ಲಿ, ಸ್ವಾತಂತ್ರ್ಯೋತ್ತರ ಸಮಯದಲ್ಲಿ, ಅಣುಯುಗದಲ್ಲಿ ಈ ಸಂಪ್ರದಾಯಶರಣ ಕಾದಂಬರಿ ಹುಟ್ಟಿದೆ. ಕನ್ನಡದಲ್ಲಿ ಪರಂಪರೆ ಹುಟ್ಟಲಿ ಮೊದಲು; ಆಮೇಲೆ ಅದನ್ನು ಮುರಿಯುವ ಸೊಗಸೇ ಬೇರೆ ಎಂದು ಪ್ರಸ್ತುತ ಲೇಖಕನು ಸೂಚಿಸುತ್ತಾನೆ. ಅದೇ ಹಟದಿಂದ ಈ ಸಾಂಪ್ರದಾಯಿಕ ಮುದ್ರೆಗಳನ್ನು ಮೈತುಂಬ ಒತ್ತಿಗೊಂಡಿದ್ದಾನೆ. ಕರ್ನಾಟಕದಲ್ಲಿ ಉತ್ತಮ ಸಾಂಪ್ರದಾಯಿಕ ಕಾದಂಬರಿಗಳು ಹುಟ್ಟಿ ಪರಂಪರೆ ನಿರ್ಮಾಣವಾಗಲಿ,

ಎಂಬ ದೂರದ ಆಸೆಯೇ ಈ ಕಾದಂಬರಿಯಾಗಿ ನಿಂತಿದೆ. ತಾನು ಬಹಳ ಮುಂದೆ ಹೋಗದಿದ್ದರೂ ತುಳಿಯಬಹುದಾದ ಹಳೆಯ ದಾರಿಯೊಂದು ಇದೆ ಎಂದು ಕೈ ಚಾಚಿ ನಿಂತುಕೊಂಡಿದೆ, ಅಷ್ಟೆ.

* * * *

ರಾಘಪ್ಪನ ಮರಣದ ನಂತರದ ಆರು ತಿಂಗಳಲ್ಲಿ ಕಿಟ್ಟಿಯ ಮನೆಯ ವಾತಾವರಣವೇ ಬದಲಿಸಿತು.

ರಾಘಪ್ಪನ ಮೃತ್ಯುಪತ್ರದಲ್ಲಿ 'ತನಗೆ ಗಂಡು ಹುಟ್ಟಿದರೆ ಪ್ರಶ್ನೆಯೇ ಇಲ್ಲ. ಆದರೆ ಹೆಣ್ಣು ಹುಟ್ಟಿದರೆ ತಾನು ದತ್ತಕ ತೆಗೆದುಕೊಳ್ಳಲಿ ಬಿಡಲಿ, ಆಸ್ತಿ ಚಿ|| ಕೃಷ್ಣನಿಗೆ.ಹೋಗಬೇಕು; ಅವನನ್ನೇ ದತ್ತಕ ತೆಗೆದುಕೊಳ್ಳುವ ವಿಚಾರ ಇದೆ. ಆದರೆ ಹುಚ್ಚು ಹಿಡಿಯುವ ಹೆದರಿಕೆ ಇದ್ದು, ಹಾಗೇನಾದರೂ ಆಗಿ ದತ್ತಕ ತೆಗೆದುಕೊಳ್ಳದೆ ಇದ್ದರೂ ಆಸ್ತಿ ಅವನಿಗೇ ಹೋಗಬೇಕು' ಎಂಬ ತಾತ್ಪರ್ಯ ವಿತ್ತು. ಇದಲ್ಲದೆ ವೆಂಕಟರಾಯ ತನ್ನ ಹಿಸೆ ಬೇಡಿದರೆ ಅದನ್ನು ಕೊಟ್ಟುಬಿಡ-ಬೇಕೆಂದೂ, ಶಾಂತಾಳ ಲಗ್ನವನ್ನು ಮಾಡಿಸಬೇಕೆಂದೂ, ಹುಟ್ಟಿದ ಮಗುವನ್ನು ಸಾಕಬೇಕೆಂದೂ, ಹೆಂಡತಿ ಬದುಕಿದ್ದರೆ ಸಲುಹಬೇಕೆಂದೂ ಬೇರೆ ಕರಾರು ಇದ್ದವು. ಬ್ರಾಹ್ಮಣರ ಸಲಹೆಯ ಮೇರೆಗೆ ಕಿಟ್ಟಿ ಒಂದು ತಿಂಗಳು ರಾಘಪ್ಪನ ಮನೆಯನ್ನು ಬಿಟ್ಟು ಶಾಂತಾಳನ್ನೂ ಕರೆದೊಯ್ದು ತನ್ನ ಮನೆಯಲ್ಲಿಯೇ ಇದ್ದನು. ಆನಂತರ ಉದಕಶಾಂತಿ ಮಾಡಿಸಿದ ಮೇಲೆ ತನ್ನ ಮನೆಯನ್ನು ಬಿಟ್ಟು ರಾಘಪ್ಪನ ಮನೆಗೆ ಇರಲಿಕ್ಕೆ ಹೋದನು.

ಕಿಟ್ಟಿಯ ಮನಸ್ಸು ಈ ರುದ್ರ ಅನುಭವಗಳ ಸುತ್ತಿಗೆಯ ಹೊಡೆತಕ್ಕೆ ಮಿದುವಾಗಿ ಹೋಯಿತು. ಒಂದೇ ಜಿಗಿತಕ್ಕೆ ಅವನು ಕರ್ಮಠತನದತ್ತ ಜಿಗಿದನು. ರಾವು ರಾವು ಹೊಡೆಯುತ್ತಿದ್ದ ಮನೆ ಉದಕಶಾಂತಿಯ ವೇದಘೋಷದಿಂದ ತಂಪಾಗಿಬಿಟ್ಟುದುದನ್ನು ಕಂಡವನೆ ಅವನಿಗೆ ಕರ್ಮಠತನದಲ್ಲಿ ಅಪಾರ ಆನಂದ ದೊರಕಿತು. ಅವನು ಹೆಚ್ಚು ಕೂಲಂಕಷ ವಿಚಾರದವನಲ್ಲ. ಸಿನೇಮಾದ ಬದಲು ಕೀರ್ತನ ಪುರಾಣಗಳಿಗೆ ಹೋಗತೊಡಗಿದನು. ತಿಂಗಳು ಎರಡು ತಿಂಗಳಿಗೊಮ್ಮೆ ಮನೆಯಲ್ಲಿ ಸತ್ಯನಾರಾಯಣ ವ್ರತ. ಚಹದಂಗಡಿ ಬಿಟ್ಟು ಬಿಟ್ಟನು. ಜಾರ್ಜಯ ಕೂಡ ಸಹ ಬಾಯಿಮಾತಿನ ಸ್ನೇಹವೆ ಉಳಿತು ಅವರ ಮನೆಯಲ್ಲಿ ಚಹ ಕುಡಿಯುವದನ್ನು ಬಿಟ್ಟುಬಿಟ್ಟನು. ಕ್ರಾಪು ತೆಳ್ಳಗಾಗಿ

ಅದರ ಮಧ್ಯೆ ತೆಳ್ಳಗಿನ ಚಂಡಿಕೆಯ ಎಳೆಗಳು ಮತ್ತೆ ಜೋತಾಡತೊಡಗಿದವು. 'ಶಾಲಿಗ್ರಾಮ ಮಹಿಮಾ' ಎಂಬ ಮರಾಠಿ ಪುಸ್ತಕವನ್ನು ಒಂದೂವರೆ ಆಣೆಗೆ ಕೊಂಡುಕೊಂಡು ಬಂದು ಅದನ್ನು ಓದುತ್ತ ದಿನಾಲು ಶಾಲಿಗ್ರಾಮಕ್ಕೆ ಅಭಿಷೇಕ ಮಾಡತೊಡಗಿದನು. ಸಂಧ್ಯಾವಂದನೆ ದಿನಾಲು ಅರ್ಧತಾಸು ಆಗಲೇಬೇಕು. ಇಂತು ದಿನದ ಕಾರ್ಯಕ್ರಮಗಳು ಹೆಚ್ಚತೊಡಗಿದಂತೆಲ್ಲ ನಿದ್ದೆಗಾಗಿ ಸಮಯ ಕಡಿಮೆಯಾಗತೊಡಗಿತು. ಮುಂಜಾನೆ ಬೇಗ ಏಳುವದು ಅವಶ್ಯವಾಯಿತು. ಇದರಿಂದ ಚಟುವಟಿಕೆ ಹೆಚ್ಚಿತು. ಮನೆಯಲ್ಲಿ ಅವನು ಮಂತ್ರ ಪುಟಪುಟಿಸುವದನ್ನು ನೋಡಿ ಎಲ್ಲರೂ ಆದರ ಮಾಡತೊಡಗಿದರು. ಕಚೇರಿಯಲ್ಲಿ ಹರಟೆ ಮುಂತಾದವುಗಳು ಕಡಿಮೆಯಾದ ಮೂಲಕ ಕೆಲಸವೂ ಚೆನ್ನಾಗಿ ಆಗತೊಡಗಿದವು. ಹೀಗಾಗಿ ಅಲ್ಲಿಯೂ ತನಗೆ ತಿಳಿಯದೆಯೆ ವರ್ಚಸ್ಸು ಕೂಡತೊಡಗಿತು. ಕೈಯಲ್ಲಿ ದುಡ್ಡು ಆಡತೊಡಗಿತು. ಮುಖವು ವೈದಿಕ ತೇಜಸ್ಸಿನಿಂದ ಕಂಗೊಳಿಸತೊಡಗಿತು. ಸ್ವಲ್ಪ ಮೈ ಕೂಡ ಬಿಟ್ಟನು. ಇಂತು ಕಿಟ್ಟಿಯ ಜೀವನ ಒಂದು ಸ್ತಿಮಿತಕ್ಕೆ ಬಂದಿತು.

ಇಂತು ಕಿಟ್ಟಿ ತನ್ನ ನಿಜವಾದ ಸ್ವಭಾವವನ್ನು, ತನ್ನ ಆಂತರಿಕ ಮೈಕಟ್ಟನ್ನು ಅರಿತುಕೊಂಡನು. ಕಿಟ್ಟಿ ಭವಿಯು. ಇದಕ್ಕಿಂತ ಅವನು ಮುಂದೆ ಹೋಗುವದು ಸಾಧ್ಯವಿಲ್ಲ. ಅವನು ಇನ್ನು ಇಪತ್ತು ವರ್ಷ ಕಾಲ ಕಳೆದರೂ ಈ ವಿಷಯದಲ್ಲಿ ಬಹಳ ಬದಲಾವಣೆ ಕಾಣಿಸಲಾರದು.

ರತ್ನಾಳ ಬೆಲೆ ಇನ್ನೂ ಕಡಿಮೆಯಾಯಿತು. ಅದರೊಡನೆ ತಂದೆ-ತಾಯಿ ಸತ್ತಾಗ 'ನಾ ನಿನಗ ತಾಯಿ ಅಲ್ಲ ಏನು?' ಎಂದು ಅನ್ನುವವರು ಒಬ್ಬರಿದ್ದಾರಲ್ಲ, ಎಂಬ ಕೃತಜ್ಞತೆಗೆ ಆಕೆ ಮಾರುಹೋದಳು. ತಾನಾಗಿಯೆ ಅತ್ತೆಯೊಡನೆ ಮಾತಾಡಿ ಕೆಲಸ ಮಾಡತೊಡಗಿದಳು. ಅತ್ತೆಗೆ ಯಾವಾಗಾದರೊಮ್ಮೆ ಒಂದು ಬಟ್ಟಲು ಹಾಲು ತಂದು 'ಕುಡಿದು ಮಲಗಿರಿ' ಎಂದೂ ಆಗ್ರಹ ಮಾಡತೊಡಗಿದಳು. ಎಲ್ಲರೂ ತನ್ನ ಪತಿಯನ್ನು ಆದರಿಸುತ್ತಿದ್ದುದನ್ನು ನೋಡಿ ಅವಳಿಗೆ ಆದರ ಹೆಚ್ಚಾಯಿತು. ಕಿಟ್ಟಿ ಗಂಡನಿಷ್ಟೇ ಅಲ್ಲ ಗುರುವೂ ಆದನು. ಮೆಲ್ಲನೆ ರತ್ನಾ ಕೆನ್ನೆಗೆ ಅರಿಷಿಣ ದಿನಾಲು ಹಚ್ಚಿಕೊಂಡು ತುಳಸಿಗೆ ನೀರು ಹಾಕತೊಡಗಿದಳು. ಪುತ್ರಪ್ರಾಪ್ತಿಗಾಗಿ ಗಂಗವ್ವ ಸೂಚಿಸಿದ ಉಪಾಯ ನಡೆಸಿದಳು.

ಗಂಗವ್ವ. ಪರದೇಸಿಯಾಗಿ ಅಳುವ ರತ್ನಾ ಶಾಂತಾರು ಗಂಗವ್ವನಿಗೆ ತನ್ನ

ಮಕ್ಕಳಾಗಿಯೇ ಕಂಡರು. ಅವರ ಭಾರವನ್ನು ಗಂಗವ್ವ ತಾನೇ ಹೊತ್ತಳು. ರಾಘಪ್ಪನ ಪ್ರಚಂಡ ಅಸ್ತಿತ್ವವು ಇಲ್ಲದಾಪೊಡನೆ ಗಂಗವ್ವನ ಮನಸ್ಸು ಶೂನ್ಯ ಗೊಂಡಿತು. ರಾಘಪ್ಪನ ದೆವ್ವವು ಬಡೆದುಕೊಂಡೀತೆಂಬ ಭೀತಿ ಕೆಲ ದಿನ ಒಳ ಗಿಂದ ಒಳಗೆ ಅವಳನ್ನು ಹಣ್ಣುಗೊಳಿಸಿತು. ನಾಲ್ಕಾರು ದಿನ ಭಯಂಕರ ಕನಸು ಗಳೂ ಬಿದ್ದವು. ಆದರೆ ಗಂಗವ್ವ ರಾಘಪ್ಪನ ಹೆಣ್ಣುಮಕ್ಕಳ ಮೇಲೆ ಅಕ್ಕರೆ ಮಾಡಿ ಈ ಭೀತಿಯನ್ನು ಹೊಡೆದೋಡಿಸಿದಳು. ದೇಸಾಯರು 'ಈಗ ಖರೆ ಗಟ್ಟ ಮನಸ್ಸು ಮಾಡಬೇಕು' ಎಂದು ಹೇಳಿದಾಗ ಗಂಗವ್ವ, 'ಗೋಪಣ್ಣಾ, ನನಗ ಇದರಾಗ ಯಾರೂ ಹೊರಗಿನವರಲ್ಲ. ಏನೋ ಆ ಕಾಲ ಇತ್ತು ಹಂಗ ಆತ್ಯ.' ಎಂದು ಹೇಳಿದಳು. ಮನೆಯಲ್ಲಿ ಎಲ್ಲರೂ ಆದರಿಸುವದನ್ನು ಕಂಡು ಆಕೆಗೆ ಒಂದು ತಿಂಗಳೊಪ್ಪತ್ತಿನಲ್ಲಿ ಮೈತುಂಬ ವಿಶ್ರಾಂತಿ ದೊರಕಿದಂತಾಯಿತು. ಬದರಿ ಯಾತ್ರೆಗೆ ಹೋಗಬೇಕೆನ್ನುವವಳು ಈ ಸುಖಕ್ಕೆ ಪ್ರಪಂಚದತ್ತ ಮನಸ್ಸು ತಿರುಗಿಸಿದಳು. ಸುದೈವದಿಂದ ಗಂಗಾಮಾಯಿ ತಾನಾಗಿಯೇ ನಡೆಯುತ್ತ ಮನೆಗೆ ಬಂದಳು. ಕಾಶಿಯಲ್ಲಿ ಇವರು ಇಳಿದುಕೊಂಡ ಪಂಡಾ ಒಬ್ಬರು ರಾಮೇಶ್ವರದ ಯಾತ್ರೆಗೆ ಹೊರಟವರು ಊರು ಊರಿಗೆ ಇಳಿದು ತಮ್ಮ ಹಳೆಯ ಯಾತ್ರಿಕರ ಮನೆಮನೆಗೆ ಹೋಗಿ ಊಟ ಮಾಡಿ ದಕ್ಷಿಣೆ ಪಡೆದು ಮುಂದೆ ಸಾಗುವವರು, ಧಾರವಾಡಕ್ಕೆ ಇಳಿದರು. ತಮ್ಮ ಒಬ್ಬ ದೊಡ್ಡ ಗಿರಾಕಿಯಾದ ದೇಸಾಯರ ಪತ್ತೆ ಹುಡುಕುತ್ತ ಬಂದರು. ಇಂಥ ಪತ್ತೆಗಳ ದೊಡ್ಡಯಾದಿಯೇ ಇತ್ತು ಅವರ ಬಳಿ. ದೇಸಾಯರು ಗಂಗವ್ವನಿಗೂ ಹೇಳಿಕಳಿಸಿದರು. ಗಂಗವ್ವ ಕಿಟ್ಟಿಯೊಂದಿಗೆ ಬಂದು, ಒಮ್ಮೆ ರಾತ್ರಿಯ ಊಟಕ್ಕೆ ಪಂಡಾರನ್ನು ತಮ್ಮಲ್ಲಿ ಕರೆದೊಯ್ದು ಊಟ ಹಾಕಿ ಒಂದು ರೂಪಾಯಿ ದಕ್ಷಿಣೆ ಕೊಡಿಸಿದಳು. ಮೇಲೆ ಒಂದು ಬಾಟಲಿ ಗಂಗಾಜಲವನ್ನು ಎಂಟು ಆಣೆಗೆ ತೆಗೆದುಕೊಂಡು ದೇವರ ನಡುವೆ ಪೂಜೆಗಾಗಿ ಇಡಿಸಿದಳು. ಇಂತು ಗಂಗಾಮಾಯಿ ಮನೆ ಸೇರಿದಳು.

ಅಚ್ಯುತರಾಯ ದೇಸಾಯರ ಪತ್ರದಂತೆ ಪುಣೆಗೆ ಹೋಗುವದನ್ನು ಬಿಟ್ಟು ಧಾರವಾಡಕ್ಕೆ ಬಂದನು. ತನಗಿಂತ ಮೊದಲು ವಸಂತನ ಲಗ್ನವಾಗಲಿಕ್ಕೆ ಅವನು ಯಾವ ಆತಂಕವನ್ನೂ ತರಲಿಲ್ಲ. ವಸಂತನೂ ಶಾಂತಾಳನ್ನು ಮಾಡಿಕೊಳ್ಳಲು ದೇಸಾಯರು ಮಾಡಿದ ಸೂಚನೆಯನ್ನು ಆನಂದದಿಂದ ಮನ್ನಿಸಿದನು. ರಾಘಪ್ಪನ ಕೊನೆಯ ವಿನಂತಿಯನ್ನು ಮನ್ನಿಸಿ ದೇಸಾಯರು ಅವನ ಮಗಳನ್ನು

ತೆಗೆದು ಕೊಂಡರೆಂಬ ವದಂತಿ ಹಬ್ಬಿ 'ಸಾಚಾ ಮನುಷ್ಯ; ದೊಡ್ಡ ಮನುಷ್ಯ;' ಎಂದು ದೇಸಾಯರು ಹೆಸರಾದರು. ಲಗ್ನದ ತಾರೀಖು ಕೂಡ ಗೊತ್ತು ಮಾಡಿ ಅಚ್ಯುತ ಪುಣೆಗೆ ಹೋದನು. ಆದರೆ ವೇಣೂಬಾಯಿಗೆ ವ್ಯಸನ. ಅವಮಾನ. ಹತ್ತು ಕೂರಿಗೆ ಹೊಲದ ರಾಘಪ್ಪನ ಮಗಳು, ಆತ್ಮಹತ್ಯ ಮಾಡಿಕೊಂಡ ರಾಘಪ್ಪನ ಮಗಳು, ತನಗೆ ಸೊಸೆ; ವರದಕ್ಷಿಣೆ ಪುಂಗಿ; ಅಚ್ಯುತನನ್ನು ಬಿಟ್ಟು ಮಾಡುವ ಲಗ್ನ. ಆಗಾಗ್ಗೆ ಹೊಟ್ಟೆತುಂಬ ಊಟಮಾಡಿ ಬಂದು ಗಂಡನ ಮುಂದೆ ಎಲೆ ಅಡಿಕೆ ಹಾಕಿಕೊಳ್ಳುತ್ತ ಕುಳಿತುಕೊಂಡು ಹಂs ಹಂs ಎಂದು ಅಳುವಳು. ದೇಸಾಯರು ಆವಳಿಗೆ ಸಮಾಧಾನ ಹೇಳುವ ಗೋಜಿಗೇ ಹೋಗಲಿಲ್ಲ. ಏಕಂದರೆ ಮುಗಿಯುವ ಅಳುವೇ ಅಲ್ಲ ಅದು.

ಲಗ್ನ ಗೊತ್ತಾದ ಮೇಲೆ ಶಾಂತಾ ವಸಂತರಾಯನ ಮುತ್ತಿನ ಸರವನ್ನೂ ಮೆಹಬೂಬಜಾನಳ ಚಂದ್ರಹಾರವನ್ನೂ ಹಾಕಿಕೊಂಡು ತನ್ನ ಓಣಿಯ ಗೆಳತಿಯರನ್ನು ಭೆಟ್ಟಿಯಾಗಿ ಬಂದಳು.

ದೇಸಾಯರು ಕಿಟ್ಟಿಯನ್ನೂ ಗಂಗವ್ವನನ್ನೂ ಕೂಡಿಯೇ ಕರೆಸಿಕೊಂಡು ಅವರ ಲೆಕ್ಕವನ್ನು ಓದಿ ಹೇಳಿ, ಈ ಬಾರಿ ಈ ಹಣದ ಭಾರವನ್ನು ತಮ್ಮಿಂದ ಹೊರುವದು ಆಗುವದಿಲ್ಲವೆಂದು ಖಂಡಿತವಾಗಿ ಹೇಳಿದರು. ಕಿಟ್ಟಿ ಆದದ್ದಕ್ಕೆಲ್ಲ ಕ್ಷಮೆ ಕೇಳಿದನು. ಅದನ್ನು ಏನು ಮಾಡಬೇಕೆಂಬುದನ್ನು ದೇಸಾಯರೇ ಹೇಳಬೇಕೆಂದೂ, ಆದ ಸಾಲವನ್ನು ಮುಟ್ಟಿಸುವ ಕೆಲಸ ತನ್ನದೇ ಎಂದೂ ಹೇಳಿದನು. ಸಾಲವನ್ನು ಕೂಡಲೆ ಮುಟ್ಟಿಸಬೇಕೆಂದೂ ಉಳಿದ ಹಣವನ್ನು ಗಂಗವ್ವನ ಹೆಸರಿನಿಂದ ಪೋಸ್ಟಿನಲ್ಲಿ ಇಡಬೇಕೆಂದೂ ದೇಸಾಯರು ಸೂಚನೆ ಮಾಡಿದರು. ಅದರಂತೆ ಮಾಡಲ್ಪಟ್ಟಿತು. ಗಂಗವ್ವನ ಹೆಸರಿನಲ್ಲಿ ಹನ್ನೆರಡು ನೂರು ರೂಪಾಯಿಗಳು ಪೋಸ್ಟಿನಲ್ಲಿ ಇಡಲ್ಪಟ್ಟವು. ಇತ್ತ ಕಿಟ್ಟಿ ಋಣಮುಕ್ತನಾದನು.

ಜೋಶಿ ರಾಮರಾಯನು ಜಾರ್ಜ ವಾಶಿಂಗ್ಟನ್ ಕಂಬಾರಗಣಿಯ ಕಠೋರ ಸತ್ಯದ ಯಂತ್ರದಲ್ಲಿ ಸಿಕ್ಕು ಹೇಗೆ ಹಿಂಬಡತಿ ಪಡೆದನೆಂಬುದು ಇನ್ನೊಂದು ದೊಡ್ಡ ಕತೆ. ಅವನು ಹಿಂಬಡತಿ ಪಡೆದು ವರ್ಗವಾಗಿ ಹೋದ ಮೇಲೆ ಜಾರ್ಜಿಯೇ ಮೊದಲು ಆ್ಯಕ್ಟಿಂಗ ಹೆಡ್‌ಕಾರಕೂನನಾದನು. ಅದರಲ್ಲಿ ಮೇಲಿನವರ ಮರ್ಜಿ ಪಡೆದು ತುಸು ದಿನದಲ್ಲಿಯೇ ಕಾಯಂ ಆದನು. ಅವನಿಗೆ ಸ್ಟೆಷನ್ನಿನ ಮೇಲೆ ಇನ್ನೊಂದು ಗಂಡುಮಗು ಆಗಿದೆ ಸ್ಯಾಮುಯೆಲ್ ಸಾರಮ್ಮ

ರತ್ನಾಳನ್ನು ಭೆಟ್ಟಿಯಾಗಲು ಬರುತ್ತಾಳೆ. ರತ್ನಾ ಆಸೆಯಿಂದ ಅವಳ ಮಕ್ಕಳನ್ನು ಎತ್ತಿ ಮುದ್ದಾಡಿಸುತ್ತಾಳೆ.

* * * *

ಪುಣೆಗೆ ಹೋದ ಅಚ್ಯುತನಿಂದ ಈ ಪತ್ರ ಬಂದಿತು.

ಕ್ಷೇಮ. ಶ್ರೀ. ಪುಣೆ.

ತೀರ್ಥರೂಪರ ಚರಣಾರವಿಂದಕ್ಕೆ ಅನೇಕ ನಮಸ್ಕಾರಗಳು. ನಾನು ಕ್ಷೇಮ. ನನ್ನ ಮೂರ್ಖತನಕ್ಕೆ ನನಗೇ ಬೇಸರವಾಗಿದೆ. ಸ್ವಲ್ಪ ಬುದ್ಧಿ ಉಪಯೋಗಿಸಿದ್ದರೆ ಮುಂಬೈಯಲ್ಲಿ ಕುಳಿತೇ ಅರ್ಧ ಸಮಸ್ಯೆ ಬಿಡಿಸಬಹುದಾಗಿತ್ತು. ಮುಂಬೈಯಲ್ಲಿ ನನಗೆ ಅನೇಕ ಗುಜರಾಥಿ ಮಾರವಾಡಿ ಮಿತ್ರರಿದ್ದಾರೆ. ಅವರ ಸ್ವಭಾವವನ್ನೂ ಮನೆಯ ಪರಿಪಾಠಗಳನ್ನೂ ನಾನೂ ಬಲ್ಲೆ. ಮನೆಯಿಂದ ಬಹುತರ ಸಿರಿವಂತರಾದ್ದರಿಂದಲೂ ವ್ಯಾಪಾರಿಗಳಾದ್ದರಿಂದಲೂ ಅವರಿಗೆ ಕಾಯದೆಯ ಹೆದರಿಕೆ ಬಹಳ. ಅದು ಗೊತ್ತಿದ್ದೂ ನಾನು ಈ ಸಂದರ್ಭದಲ್ಲಿ ಅದನ್ನು ಉಪಯೋಗಿಸಲಾರದೆ ಹೋದೆನು.

ಪುಣೆಯಲ್ಲಿ ತಾಖತ್‌ಮಲ್ಲ ಸೇಠರು ಇನ್ನೂ ಇದ್ದಾರೆ. ಅವರ ಭೆಟ್ಟಿಯೂ ಆಯಿತು. ಅವರಲ್ಲಿ ವೆಂಕಟರಾಯನೆಂಬವನೊಬ್ಬನು ಕೆಲಸಕ್ಕೆ ಇದ್ದನೆಂಬುದು ಅವರಿಗೆ ನಿಚ್ಚಳವಾಗಿ ನೆನಪು ಇತ್ತು. ಚೆಕ್ಕಿನ ಫೋರ್ಜರಿಯ ವಿಷಯಕ್ಕೆ ಅವರಿಗೆ ಕೇಳಲಾಗಿ ಅವರು ಹಾರಿಕೆಯ ಉತ್ತರ ಕೊಟ್ಟರು. 'ನಾನೇ ಮರೆತಿದ್ದೆ. ಚೆಕ್ಕು ಸರಿಯೇ ಇತ್ತು. ಅದಕ್ಕಾಗಿ ಕಂಪ್ಲೇಂಟು ಹಿಂದೆ ತೆಗೆದುಕೊಂಡೆ' ಎಂದು ಹೇಳಿದರು. ಅವರಿಗೆ ನಾನು ಮುಂದೆ ಆದ ಪರಿಣಾಮಗಳ ಬಗ್ಗೆ ಇನ್ನೂ ಏನೂ ಹೇಳಿಲ್ಲ. ಅವಶ್ಯ ಬಿದ್ದರೆ ಇನ್ನೊಮ್ಮೆ ಹೋಗಿ ಎಲ್ಲವನ್ನೂ ವಿವರಿಸಿ ಯಾವುದಾದರೂ ಅಕ್ಕಸಾಲಿಗರ ಮುಖಾಂತರ ಕಿವಿ ಚುಚ್ಚಿಸಿ ಅವರ ಬಿಗುಹನ್ನು ಸಡಿಲಿಸಬೇಕೆಂದು ಯೋಚಿಸಿದ್ದೇನೆ.

ಇದರ ಮೇಲಿಂದ ನನ್ನ ಸ್ಪಷ್ಟ ತರ್ಕ. ಲೆಕ್ಕದ ಹೆಚ್ಚುಕಡಿಮೆಯಾದೊಡನೆ ಹಿಂದುಮುಂದಿನ ವಿಚಾರವಿಲ್ಲದೆ ಸೇಠರು ಪೋಲೀಸರಿಗೆ ದೂರು ಕೊಟ್ಟಿರಬೇಕು. ಪೋಲೀಸರು ತುಸು ವಿಚಾರಣೆ ಮಾಡುವಷ್ಟರಲ್ಲಿ ಸೇಠರಿಗೆ ಈ ಎಲ್ಲ ಪ್ರಕರಣ ತಮ್ಮ ಮಗನ ವರೆಗೂ ಬಂದು ಮುಟ್ಟುತ್ತದೆಯೆಂದು ವಾಸನೆ ಹತ್ತಿರಬೇಕು. ಎಲ್ಲ ಸೇಠರ ಮಕ್ಕಳು ತಮ್ಮ ತಮ್ಮ ಬಾಲ್ಯದಲ್ಲಿ ಅವಿವೇಕ ಮಾಡಿರುತ್ತಾರೆ.

ಅವರೇ ತುಸು ವಯಸ್ಸಿಗೆ ಬಂದೊಡನೆ ತಮ್ಮ ತಂದೆಯ ವ್ಯವಹಾರವನ್ನು ಮಾಡುತ್ತ ಅವರಿಗಿಂತ ಹೆಚ್ಚು ಜಾಣರಾಗುತ್ತಾರೆ. ಇದು ಆ ಜನರ ಸಾಮಾನ್ಯ ಅನುಭವ. ಈಗ ಸೇಠರ ಅಂಗಡಿಯ ಮೇಲೆ ಅವರ ಹೆಸರಿನ ಬೋರ್ಡಿನೊಡನೆ ಬಾಬೂಭಾಯಿಯ ಹೆಸರೂ ನೇತಾಡುತ್ತಿದ್ದುದನ್ನು ನೋಡಿದ್ದೇನೆ. ವ್ಯಾಪಾರಸ್ಥರಾದ ಸೇಠರು ತಮ್ಮ ಮಗ ಕ್ರಿಮಿನಲ್ ಕೋರ್ಟಿನ ಕಟ್ಟೆಯನ್ನು (ಬರಿ ಸಾಕ್ಷಿಕೊಡುವದಕ್ಕೆ ಆಗಲಿ) ಹತ್ತಿಸಬಿಡುವದು ಅವರ ವ್ಯಾಪಾರೀ ಧರ್ಮಕ್ಕೇ ವಿರುದ್ಧವಾಗಿದೆ. ಅದರಿಂದ ಅವರ ನಾಮೆಯೇ ಹಾಳಾಗುತ್ತದೆ. ಅದಕ್ಕಾಗಿ ಏನೇನಾದರೂ ಉಪಾಯ ಮಾಡಿ, ಚೆಕ್ಕು ನಿಜವಿತ್ತೆಂದೂ ತಮ್ಮದೇ ಲೆಕ್ಕ ತಪ್ಪಿತ್ತೆಂದೂ ವಾದಿಸಿ, ಮತ್ತೆ ಬೇರೆ ವಾಮಮಾರ್ಗ ಪ್ರಯೋಗಿಸಿ ಸೇಠರು ಕೋರ್ಟಿನಲ್ಲಿ ಬೊಬ್ಬಾಟವಿಲ್ಲದೆ ದಾಟುವ ಹಾಗೆ ಮಾಡಿದಂತೆ ತೋರುತ್ತದೆ. ತಾಜೀಮುದ್ದೀನನಿಗೆ ಬೆದರಿಸಿಯಾಗಲಿ, ಕೈಬೆಚ್ಚಗೆ ಮಾಡಿಯಾಗಲಿ ಓಡಿಸಿರಬಹುದು. ಖಟ್ಲೆಯನ್ನು ವಿನಾಕಾರಣ ಮುಂದೆ ಮುಂದೆ ದೂಡಿ ಕೊನೆಗೆ ಮೂಲಕಾರಣ ಹುಸಿಯೆಂದು ತೋರಿಸಿ ಅಲ್ಲಿಯೇ ಶಾಂತವಾಗುಂತೆ ಮಾಡಿರುವರೆಂದು ನನ್ನ ತರ್ಕ.

ಆದರೆ ನಾನು ಹುಡುಗನೆಂದು ಸೇಠರು ಬಹಳ ಮಾತಾಡಲಿಲ್ಲ. ಅವರು ಅನಾದರ ಮಾಡಿದ್ದರಿಂದ ಮುಂದಿನದನ್ನು ನಾನೇ ಹೇಳಬಾರದೆಂದು ಬಿಟ್ಟುಬಿಟ್ಟೆನು. ಅದಕ್ಕಾಗಿ ನೀವೇ ಮುಂಬೈಗೆ ಬರಬೇಕು. ಸೇಠರು ಒಳ್ಳೆಯವರು. ಅವರಿಗೆ ಈ ಚೆಕ್ಕಿನಿಂದ ಆದ ಅನಾಹುತ ತಿಳಿದರೆ ತಾವೂ ಮುಂದೆ ಬಿದ್ದು ಎಲ್ಲ ಸಹಾಯಮಾಡಹುದೆಂದು ನನಗೆ ಭರವಸೆ ಇದೆ. ಅವರಿಂದ ಆ ಖಟ್ಲೆಯ ನಂಬರು ಸಿಕ್ಕರೆ ಸಾಕು. ಮುಂದಿನದನ್ನು ನಾವೇ ಹುಡುಕುವದು ಸಾಧ್ಯವಿದೆ.

ಒಟ್ಟಿನ ಮೇಲೆ ನೋಡಲು, ಸ್ವಾಮಿರಾಯನಿಗೆ ಹಿಂದಕ್ಕೆ ಆದ ಹಾನಿಯನ್ನು ಈಗ ಸರಕಾರದಿಂದ ತುಂಬಿಸಿಕೊಳ್ಳಲು ಬರುತ್ತದೆಯೆಂದು ನನ್ನ ಭಾವನೆ. ಏಕೆಂದರೆ ಜಾಮೀನು ಆದದ್ದಕ್ಕಾಗಿ ಸರಕಾರವು ಸ್ವಾಮಿರಾಯನಿಂದ ಐದು ಸಾವಿರ ರೂಪಾಯಿ ವಸೂಲಿ ಮಾಡಿತು. ಆದರೆ ಮುಂದೆ ಆದೆ ಖಟ್ಲೆ ಸುಳ್ಳಾಗಿ ಕೊನೆಗಂಡಿತು. ಖಟ್ಲೆ ನೆನೆಗುದಿಗೆ ಬಿದ್ದ ಮೂಲಕ ಹಾಗು ಅದರ ಪರಿಣಾಮ ಯಾರಿಗೂ ತಿಳಿಯದ ಮೂಲಕ ರಿಫಂಡಿಗಾಗಿ ಈ ವರೆಗೆ ಯಾರೂ ಅರ್ಜಿ ಹಾಕಿಲ್ಲವೆಂದೇ ಹಣ ಇನ್ನೂ ಸರಕಾರದ ಬಳಿ ಉಳಿದಿದೆ. ಅಂದ ಮೇಲೆ

ಈಗ ಸ್ವಾಮಿರಾಯನ ವಾರಸದಾರ ಕೃಷ್ಣಾಜಿ ಕಡೆಯಿಂದ ರಿಫಂಡಿಗಾಗಿ ಅರ್ಜಿ ಹಾಕಿಸಬಹುದಲ್ಲವೇ ? ಇದಲ್ಲದೆ ವೆಂಕಟರಾಯನೂ ಅಜ್ಞಾತವಾಸದಲ್ಲಿ ಉಳಿಯುವ ಕಾರಣ ಬೀಳುವದಿಲ್ಲ. ಅವನೂ ಪೋಲೀಸರ ಹೆದರಿಕೆಯಿಲ್ಲದೆ ಆಡ್ಡಾಡಬಲ್ಲನು.

ಆದರೆ ಇದಕ್ಕೆಲ್ಲ ಸೇಠ ತಾಖಿತ್‌ಮಲ್ಲರ ಸಹಕಾರ ಬೇಕು. ಅದನ್ನು ನಾನು ಪಡೆಯುವದು ಅಸಂಭವ. ತಾವೇ ಬರಬೇಕಾಗಿ ವಿನಂತಿ. ತಮ್ಮಿಂದ ಈ ಕೆಲಸ ಖಂಡಿತವಾಗಿ ಕೊನೆಗಾಣುತ್ತದೆಂದು ನನಗೆ ವಿಶ್ವಾಸವಿದೆ. ನೀವು ಬಂದಮೇಲೆ ಇಲ್ಲಿಯ ಒಬ್ಬ ನನ್ನ ತರುಣ ವಕೀಲ ಮಿತ್ರರನ್ನು ಭೆಟ್ಟಿಯಾಗಿ, ಶಕ್ಯವಾದರೆ ಅವರೊಡನೆ ಪುಣೆಗೆ ಹೋಗೋಣ. ಎಂದು ಬರುತ್ತೀರೋ ತಿಳಿಸಬೇಕು. ಮಾತೋಶ್ರೀಯವರಿಗೆ ಅನಂತ ವಂದನೆಗಳು. ಅವರು ಹೇಗಾದರೂ ಮಾಡಿ ವಸಂತರಾಯನ ಮದುವೆಯ ಜೊತೆಗೇ ನಾನೂ ಲಗ್ನ ಮಾಡಿಕೊಳ್ಳಬೇಕೆಂದು ನನಗೆ ಆಗ್ರಹ ಮಾಡಿದರು. 'ಒಲ್ಲೆ'ನೆಂದು ಬಹಳ ನಿಷ್ಠುರನಾಗಿ ಹೇಳಿದೆ.ಅವರ ಮನಸ್ಸು ಬಹಳ ನೊಂದಿದೆ.ಕಾರಣ ಸಮಾಧಾನ ಮಾಡಬೇಕು. ಈ ಬಾರಿ ಪತ್ರದಲ್ಲಿ ಅವರಿಂದ ಒಂದು ಸಾಲು ಬರೆಸಬೇಕು, ಎಂದು ಕಳಕಳಿಯ ಪ್ರಾರ್ಥನೆ. ತಮ್ಮಂದಿರಿಗೆ ಆಶೀರ್ವಾದಗಳು. ಬರುವಾಗ ಚಿ|| ಪುರುಷೋತ್ತಮನನ್ನು ಕರಕೊಂಡು ಬರಬೇಕು.

ಇಂತೀ ಪ್ರೀತಿಯ,

**—ಅಚ್ಯುತರಾಯ**

* * * *

ಪ್ರಿಯ ವಾಚಕರೆ, ಅಚ್ಯುತರಾಯನ ಹೆಸರಿನಿಂದ ಈ ಕಾದಂಬರಿ ಕೊನೆಗಂಡಿತು. ಮೂರು ಪತ್ರಗಳನ್ನು ಬರೆಯುವದನ್ನು ಬಿಟ್ಟು ಅಚ್ಯುತರಾಯನು ನಮ್ಮ ಕತೆಯಲ್ಲಿ ಇನ್ನೇನೂ ಮಾಡಲಿಲ್ಲ. ಅವನೆಂದರೆ ಲೇಖಕನಿಗೆ ಪ್ರೀತಿಯೂ ಬಹಳ ಭೀತಿಯೂ ಬಹಳ. ಅವನ ಕತೆಯನ್ನು ಹೇಳುತ್ತ ಹೋದರೆ ಅದು ಇನ್ನೊಂದು ಕಾದಂಬರಿಯಾಗಬಹುದು.ಅದಕ್ಕಾಗಿ ಪ್ರಸ್ತುತ ಲೇಖಕನು ಅವನ ಸಂಗತಿಯನ್ನು ತಪ್ಪಿಸಿದ್ದಾನೆ. ಆದರೆ ಮುಗಿಸುವಾಗ ಅವನ ಕ್ಷಮೆ ಕೋರಿ ಓದುಗರ ಅಪ್ಪಣೆ ಕೇಳಿಕೊಂಡಿದ್ದಾನೆ.

ಇಂತೀ ಮಂಗಲಂ.

## ಮನೋಹರ ಗ್ರಂಥಮಾಲಾ, ಧಾರವಾಡ

ಈ ಗ್ರಂಥಮಾಲೆಯು ಹದಿನೈದನೆಯ **ಅಗಸ್ಟ ೧೯೩೩ ಕ್ಕೆ** ಪ್ರಾರಂಭವಾಗಿದೆ.

ಕಾದಂಬರಿ, ಸಣ್ಣಕತೆ, ನಾಟಕ, ಹರಟೆ, ದಿನಚರಿ ಮೊದಲಾದ ಸರಸಸಾಹಿತ್ಯವನ್ನೂ ಕಾವ್ಯ, ವಿಮರ್ಶೆ, ವೇದಾಂತ, ವಿಜ್ಞಾನ ಮೊದಲಾದ ವಿಚಾರಸಾಹಿತ್ಯವನ್ನೂ ಸಂಗೀತ, ನೃತ್ಯ, ಚಿತ್ರಕಲೆ, ಶಿಲ್ಪಕಲೆ, ಆರೋಗ್ಯ, ಗೃಹಜೀವನ, ಸೂಚಿಶಿಲ್ಪ, ಗೃಹಾಲಂಕಾರ, ಪ್ರವಾಸ ಪರಿಚಯ ಮೊದಲಾದ ಸರ್ವಜ್ಞಾನಪರಿಚಯವನ್ನು ಮಾಡಿಕೊಡುವಂತಹ ಪ್ರಯೋಜಕ ಸಾಹಿತ್ಯವನ್ನೂ ಈ ಗ್ರಂಥಮಾಲೆಯು ಪ್ರಕಟಿಸುತ್ತದೆ.

ಈ ಕಾರ್ಯದಲ್ಲಿ ಶ್ರೀಯುತರಾದ **ದ. ರಾ. ಬೇಂದ್ರೆ, ವಿ. ಕೃ. ಗೋಕಾಕ, ರಂ. ಶ್ರೀ. ಮುಗುಳಿ** ಈ ಸಹೃದಯರು ಪ್ರಾರಂಭದಿಂದಲೂ ಈ ಗ್ರಂಥಮಾಲೆಗೆ ಸಾಹಿತ್ಯವಿಷಯದಲ್ಲಿ ಸಲಹೆಗಾರರಾಗಿ ಮಾರ್ಗದರ್ಶನ ಮಾಡುತ್ತಿದ್ದಾರೆ.

ಇಡಿ ಕನ್ನಡನಾಡಿನ ಸಿದ್ಧಹಸ್ತ ಬರೆಹಗಾರರೆಲ್ಲರೂ ಈ ಗ್ರಂಥಮಾಲೆಗಾಗಿ ಗ್ರಂಥಗಳನ್ನು ಬರೆದುಕೊಟ್ಟು ಅದರ ಗೌರವವನ್ನೂ ಕೀರ್ತಿಯನ್ನೂ ಹೆಚ್ಚಿಸಿದ್ದಾರೆ; ಗ್ರಂಥಮಾಲೆಯ ಸಾಹಿತ್ಯಸ್ಥಾನವನ್ನು ಉನ್ನತವಾಗಿಸಿದ್ದಾರೆ.

ಗ್ರಂಥಮಾಲೆಯ ಹೊಸ ವರ್ಷಾರಂಭವು **ಅಗಸ್ಟ** ತಿಂಗಳಿಂದಾಗುತ್ತದೆ.

ಅಗಸ್ಟದಿಂದ ಜುಲೈ ವರೆಗಿನ ಒಂದು ವರ್ಷದ ಅವಧಿಯಲ್ಲಿ ಈ ಗ್ರಂಥಮಾಲೆಯು ತನ್ನ ಗ್ರಾಹಕರಿಗೆ, ಅವರಿಂದ ಸಂದ ಚಂದಾಹಣದಲ್ಲಿ **ಒಂದು ಸಾವಿರ ಪುಟಗಳ** ಸಾಹಿತ್ಯವನ್ನು ಸಲ್ಲಿಸುವುದು. ಅಂಚೆಯ ದರ ಮೊದಲಿಗಿಂತಲೂ ಹೆಚ್ಚೆಚ್ಚು ಏರುತ್ತ ಬಂದಿದ್ದರಿಂದ ಗ್ರಂಥಗಳನ್ನು ಒಂದೇ ಕಂತಿನಲ್ಲಿ, ಹೆಚ್ಚೆಂದರೆ ಎರಡು ಕಂತುಗಳಲ್ಲಿ ಮಾತ್ರ ಚಂದಾದಾರರಿಗೆ ರಜಿಸ್ಟರದಿಂದ ತಲುಪಿಸಲಾಗುತ್ತದೆ.

ಆಯಾ ವರ್ಷದಲ್ಲಿ ಪ್ರಕಟವಾಗುವ ಗ್ರಂಥಗಳ ಸಂಖ್ಯೆಯು ಅವುಗಳ ಪುಟಸಂಖ್ಯೆಯ ಪ್ರಮಾಣದ ಮೇಲಿಂದ ಹೆಚ್ಚುಕಡಿಮೆಯಾಗಬಹುದು.

ಗ್ರಂಥಮಾಲೆಯ ಸದ್ಯದ ವಾರ್ಷಿಕ ಚಂದಾ **ಆರು ರೂಪಾಯಿ ಐವತ್ತು ನಯೆಪೈಸೆ** ಮಾತ್ರ. ( ೬.೫೦ ) ಇದೆ.

[ಅಗಸ್ಟ ೧೯೫೪ಳರ ಹಿಂದೆ ಗ್ರಂಥಮಾಲೆಯ ವಾರ್ಷಿಕ ಚಂದಾ ಎಂಟು ರೂಪಾಯಿ ಇದ್ದುದನ್ನು, ಹೊಸವರ್ಷದಿಂದ – ಅಂದರೆ ಅಗಸ್ಟ ೧೯೫೪ಳರಿಂದ ಪ್ರಾರಂಭವಾಗುವ ಹೊಸ ವರ್ಷದಿಂದ – ಆರು ರೂಪಾಯಿ ಎಂಟಾಣೆಗೆ ಇಳಿಸಲಾಗಿದೆ.]

ಗ್ರಂಥಮಾಲೆಗೆ ಒಂದೇ ಸಲಕ್ಕೆ **೧೫೦ ರೂಪಾಯಿ** ಸಲ್ಲಿಸಿದವರನ್ನು ಆಜೀವ ಚಂದಾದಾರರನ್ನಾಗಿ ಮಾಡಿಕೊಂಡು, ಅವರಿಗೆ ಆ ವರ್ಷದಿಂದ ಪ್ರಾರಂಭಮಾಡಿಕೊಂಡು ಅವರ ಆಜನ್ಮಪರ್ಯಂತ ಮಾಲೆಯ ಗ್ರಂಥಗಳನ್ನು ಹಾಗೆಯೆ ಸಲ್ಲಿಸಲಾಗುವುದು ಮತ್ತು ಬಿಡಿಮುತ್ತುಗಳನ್ನು ಅವರಿಗೆ ಅರ್ಧ ಬೆಲೆಗೆ ಕೊಡಲಾಗುವುದು.

ವರ್ಷದಲ್ಲಿ ಯಾವಾಗ ಬೇಕಾದರೂ ಹೊಸದಾಗಿ ಚಂದಾದಾರರಾಗಬಹುದು.

ಚಂದಾಹಣವನ್ನು ಮುಂಗಡವಾಗಿ ಕೆಳಗೆ ಕಾಣಿಸಿದ ವಿಳಾಸಕ್ಕೆ ಮನಿಯಾರ್ಡರ ಮೂಲಕ ಕಳುಹಿಸಿಕೊಡಬೇಕು.

ಗ್ರಂಥಮಾಲೆಯ ಹಿಂದಿನ ಗ್ರಂಥಗಳಿಗೆ ಚಂದಾಸವಲತ್ತು ಅನ್ವಯಿಸುವುದಿಲ್ಲ.

ಗ್ರಂಥಗಳಿಗಾಗಿ ಬೇಡಿಕೆ ಕಳಿಸಿಕೊಡುವವರು **"ಮಾರಾಟಕ್ಕೆ ದೊರೆಯುವ ಗ್ರಂಥಗಳ"** ಪಟ್ಟಿಯನ್ನು ದಯವಿಟ್ಟು ಗಮನಿಸಬೇಕು.

ಪುಸ್ತಕವ್ಯಾಪಾರಿಗಳಿಗೆ ಮುಖಬೆಲೆಯ ಮೇಲೆ ೨೫% ಕಮಿಶನ್ ಕೊಡಲಾಗುವದು. ಪ್ಯಾಕಿಂಗ್, ಅಂಚೆವೆಚ್ಚ ಪ್ರತ್ಯೇಕ.

**ಸಂಪಾದಕ :**

**ಮನೋಹರ ಗ್ರಂಥಮಾಲಾ, ಧಾರವಾಡ**

# ಮಾರಾಟಕ್ಕೆ ದೊರೆಯುವ ಗ್ರಂಥಗಳು

## ಕಾದಂಬರಿಗಳು :

| | | | | | |
|---|---|---|---|---|---|
| ೧ | ಧರ್ಮಸೆರೆ | ಜಡಭರತ | ೨ | ೦ | ೦ |
| ೨ | ಅನಂತ | ಸತ್ಯಬೋಧ | ೧ | ೪ | ೦ |
| ೩ | ಮಾದನಮಗಳು | ಎಂ. ವಿ. ಸೀ. | ೬ | ೦ | ೦ |
| ೪ | ಮರ್ಯಾದೆಮಹಲು | ಅಶ್ವತ್ಥ | ೩ | ೮ | ೦ |
| ೫ | ಮೇದಿನಾಪುರದ ಮಲ್ಲ | ಗುರುರಾಜ ಜೋಶಿ | ೧ | ೮ | ೦ |
| ೬ | ಇಂದ್ರಚಾಪ | ತಲ್ಚೇರ ರಂಗರಾವ್ | ೨ | ೮ | ೦ |
| ೭ | ಎರಡನೆಯ ಸಂಬಂಧ | ಎನ್ಕೆ. ಕುಲಕರ್ಣಿ | ೩ | ೦ | ೦ |
| ೮ | ಗೃಹದಾರಣ್ಯಕ | ನಾ. ಕಸ್ತೂರಿ | ೧ | ೮ | ೦ |
| ೯ | ಔರಂಗಜೇಬ | ಕೆ. ವಾಸುದೇವಾಚಾರ್ಯ | ೩ | ೦ | ೦ |
| ೧೦ | ಗಂಗವ್ವ ಮತ್ತು ಗಂಗಾಮಾಯಿ | ಎಸ್. ಆರ್. ಮೊಕಾಶಿ | ೩ | ೪ | ೦ |
| ೧೧ | ವಾಲ್ಮೀಕಿ ವಿಜಯ | ,, | ೧ | ೦ | ೦ |
| ೧೨ | ಗೃಹದೇವತೆ | ಶ್ರೀಮತಿ ಬಿ. ವಿ. ಚಂಪಕಮಾಲಾ | ೪ | ೦ | ೦ |
| ೧೩ | ರೋಹರಾ | ಬಿ. ಎಚ್. ಕೊಪ್ಪರ | ೧ | ೧೨ | ೦ |
| ೧೪ | ಸಮರಸವೇ ಜೀವನ | ವಿ. ಕೃ. ಗೋಕಾಕ | ೧೫ | ೦ | ೦ |

## ನಾಟಕಗಳು :

| | | | | | |
|---|---|---|---|---|---|
| ೧೫ | ಎತ್ತಿದ ಕೈ | ರಂ. ಶ್ರೀ. ಮುಗಳಿ | ೧ | ೧೪ | ೦ |
| ೧೬ | ಮಗು | ಅಶ್ವತ್ಥ | ೧ | ೮ | ೦ |
| ೧೭ | ಪತಿತೋದ್ಧಾರ | ಎನ್ಕೆ. ಹುಯಿಲಗೋಳ | ೧ | ೮ | ೦ |
| ೧೮ | ಭಾಗ್ಯಶ್ರೀ | ಲ. ಜಿ. ಬೇಂದ್ರೆ | ೧ | ೦ | ೦ |
| ೧೯ | ಸ್ವಪ್ನದರ್ಶಿ ಮತ್ತು ಇತರ ಗೀತನಾಟಕಗಳು | ಕೆ.ಡಿ. ಕುರ್ತಕೋಟ | ೧ | ೧೨ | ೦ |
| ೨೦ | ಆ ಮನಿ | ,, ,, | ೧ | ೦ | ೦ |

## ಸಣ್ಣ ಕತೆ, ಲಲಿತಪ್ರಬಂಧಗಳು :

| | | | | | |
|---|---|---|---|---|---|
| ೨೧ | ಕುರಿಹಿಂಡು | ಜಲಧರ | ೨ | ೮ | ೦ |
| ೨೨ | ಹೂಬಾಣಗಳು | ಪ. ರಮಾನಂದ | ೩ | ೦ | ೦ |
| ೨೩ | ಜಡಭರತನ ಕನಸುಗಳು | ಜಡಭರತ | ೧ | ೮ | ೦ |

| | | | | |
|---|---|---|---|---|
| ೨೪ ಚೀನದ ಬಾಳು-ಬದುಕು | ಬೇರೆ ಬೇರೆಯವರು | ೭ | ೦ | ೦ |
| ೨೫ ಬಾಳಹೊಳೆ | ಅಶ್ವತ್ಥ | ೨ | ೮ | ೦ |
| ೨೬ ಮೂಲಾ ಮತ್ತು ಇತರ ಕತೆಗಳು | ಶ್ರೀಮತಿ ಕ್ಯಾತ್ಯಾಯಿನಿ | ೨ | ೦ | ೦ |
| ೨೭ ಕೆಂಪುಗುಲಾಬಿ | ಶ್ರೀಮತಿ ಸೀತಾರತ್ನ | ೧ | ೮ | ೦ |
| ೨೮ ಬಾಗಿನ | ಶ್ರೀಮತಿ ಲಲಿತಮ್ಮ | ೧ | ೦ | ೦ |

## ಕಾವ್ಯಗಳು:

| | | | | |
|---|---|---|---|---|
| ೨೯ ಗರಿ | ಅಂಬಿಕಾತನಯದತ್ತ (ಒಳ್ಳೆಕಾಗದ) | ೨ | ೮ | ೦ |
| ೩೦ ಬಾಳದೇಗುಲದಲ್ಲಿ | ವಿ. ಕೃ. ಗೋಕಾಕ ,, | ೫ | ೦ | ೦ |
| | ಸಾದಾ | ೩ | ೮ | ೦ |
| ೩೧ ಸಮುದ್ರಗೀತಗಳು | ,, | ೧ | ೦ | ೦ |
| ೩೨ ಮಹಾಯುದ್ಧ | ಅಶ್ವತ್ಥ | ೧ | ೮ | ೦ |

## ಇತರ ಸಾಹಿತ್ಯ:

| | | | | |
|---|---|---|---|---|
| ೩೩ ಸಾಹಿತ್ಯ ಮತ್ತು ವಿಮರ್ಶೆ | ದ. ರಾ. ಬೇಂದ್ರೆ | ೧ | ೮ | ೦ |
| ೩೪ ದತ್ತವಾಣಿ | ಮಿರ್ಜಿ ಅಣ್ಣಾರಾಯ | ೧ | ೪ | ೦ |
| ೩೫ ಮಾತೃವಾಣಿ | ಮಧುರಚೆನ್ನ | ೧ | ೪ | ೦ |
| ೩೬ ಯಾತ್ರಿಕ | ರಂಗನಾಥ ದಿವಾಕರ | ೨ | ೦ | ೦ |
| ೩೭ ಕವಿ-ಕಾವ್ಯ-ದೃಷ್ಟಿ | ವಿ. ಸೀ | ೨ | ೦ | ೦ |

# ಅಚ್ಚಿನಲ್ಲಿರುವ ಗ್ರಂಥಗಳು

## ಗ್ರಂಥಮಾಲೆಯಲ್ಲಿ:

| | |
|---|---|
| ೧ "ಖೊ !" (ಪ್ರಾಯೋಗಿಕ ಕಾದಂಬರಿ) | ವಿವಿಧ ಲೇಖಕರು |
| ೨ ಮೂಕಬಲಿ (ಕಾದಂಬರಿ) | ಜಡಭರತ |
| ೩ ಸಾಹಿತ್ಯಕೇಳಿ (ಪ್ರಾಯೋಗಿಕ ಕಾದಂಬರಿ) | ವಿವಿಧ ಲೇಖಕರು |
| ೪ ಮೊದಲ ಹೂ (ಸಣ್ಣ ಕತೆಗಳು) | ಜಡಭರತ |
| ೫ ಜಡಭರತರ ದಿನಚರಿ | ,, |
| ೬ ನಾನು-ನನ್ನದು (ಪ್ರಬಂಧಗಳು) | ,, |
| ೭ ಕವಿ ಬೇಂದ್ರೆ (ಸಾಹಿತ್ಯವಿಮರ್ಶೆ) | ಶ್ರೀ. ಕೀರ್ತಿ ಕುರ್ತಕೋಟಿ |
| ೮ ಕುಮಾರವ್ಯಾಸ (ಕಾವ್ಯರಸಗ್ರಹಣ) | ,, |
| ೯ ನಾಟಕ-ರಂಗ-ಪ್ರಯೋಗ | ಜಿ. ಬಿ. ಜೋಶಿ |
| ೧೦ ಆಡುನಾಟಕಗಳು | ,, |

## ಬಿಡಿಮುತ್ತುಗಳು :

| | | |
|---|---|---|
| ೧೧ | ಜೀವಫಲ (ಕವನಸಂಗ್ರಹ) | ಜಡಭರತ |
| ೧೨ | ಸಂಶೋಧನ ಮತ್ತು ಸಮಾಲೋಚನೆ | ಸದಾನಂದ ನಾಯಕ |
| ೧೩ | ತ್ರಿಶಂಕು (ಕವನಸಂಗ್ರಹ) | ಕೀರ್ತಿ ಕುರ್ತಕೋಟಿ |

## ಹಿಂದಿನ ಎರಡು ವರ್ಷಗಳ ಗ್ರಂಥಗಳು

[ ೧೯೫೩ ಅಗಸ್ಟದಿಂದ ೧೯೫೪ ಜುಲೈ ವರೆಗೆ ]

| | | | | |
|---|---|---|---|---|
| ೧೨೧ | ಮಾಲಾ ಮತ್ತು ಇತರ ಕಥೆಗಳು | ಶ್ರೀಮತಿ ಕಾತ್ಯಾಯಿನಿ | ೨೧೨ | ೨-೦-೦ |
| ೧೨೨ | ಗೃಹದಾರಣ್ಯಕ | ನಾ. ಕಸ್ತೂರಿ | ೧೫೦ | ೧-೮-೦ |
| ೧೨೩ | ಪತಿತೋದ್ಧಾರ | ಎನ್ಕೆ. ಹುಯಿಲಗೋಳ | ೧೩೫ | ೧-೮-೦ |
| ೧೨೪ ೧೨೫ | ಶಾಂತಲಾ | ಕೆ. ವಿ. ಅಯ್ಯರ | ೪೧೦ | ೪-೮-೦ |
| ೧೨೬ | ಕೆಂಪುಗುಲಾಬಿ | ಶ್ರೀಮತಿ ಎಂ. ಸೀತಾರತ್ನ | ೧೪೧ | ೧-೫-೦ |

(ಒಟ್ಟು ಕೊಟ್ಟ ಪುಟಗಳು ೧೦೫೦ ಮುಖಬೆಲೆ ೧೧-೦-೦)

[೧೯೫೪ ಅಗಸ್ಟದಿಂದ ೧೯೫೫ ಜುಲೈ ವರೆಗೆ]

| | | | | |
|---|---|---|---|---|
| ೧೨೭ | ಯಾತ್ರಿಕ | ರಂಗನಾಥ ದಿವಾಕರ | ೧೬೦ | ೨-೦-೦ |
| ೧೨೮ ೧೨೯ | ಗೃಹದೇವತೆ | ಶ್ರೀಮತಿ ಬಿ.ವಿ.ಚಂಪಕಮಾಲಾ | ೪೦೫ | ೪-೦-೦ |
| ೧೩೦ | ಬಾಗಿನ | ಶ್ರೀಮತಿ ಲಲಿತಾ ರಾಮಣ್ಣ | ೧೦೮ | ೧-೦-೦ |
| ೧೩೧ | ಝೋಹರಾ | ಡಿ. ಎಚ್. ಕೊಪ್ಪರ | ೧೫೬ | ೧-೧೨-೦ |
| ೧೩೨ | ಸ್ವಪ್ನದರ್ಶಿ | ಕೀರ್ತಿನಾಥ ಕುರ್ತಕೋಟಿ | ೧೭೦ | ೧-೧೨-೦ |

(ಒಟ್ಟು ಕೊಟ್ಟ ಪುಟಗಳು ೯೯೯ ಮುಖಬೆಲೆ ೧೦-೮-೦)

[೧೯೫೫ ಅಗಸ್ಟದಿಂದ ೧೯೫೬ ಜುಲೈ ವರೆಗೆ]

| | | | | |
|---|---|---|---|---|
| ೧೩೩ ೧೩೪ | ಗಂಗವ್ವ ಮತ್ತು ಗಂಗಾಮಾಯಿ | ಎಸ್. ಆರ್. ಮೊಕಾಶಿ | ೩೦೬ | ೩-೪-೦ |

# ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಗ್ರಂಥಗಳು

**ಕಾದಂಬರಿಗಳು :**

(ಸ್ವತಂತ್ರ ಸಾಮಾಜಿಕ)

| | | | |
|---|---|---|---|
| ೧. | ಸುದರ್ಶನ | ... ಆನಂದಕಂದ | ೧೯೩೩ |
| ೨. | ಬಾಳುರಿ | .... ರಂ. ಶ್ರೀ. ಮುಗಳಿ | ೧೯೩೪ |
| ೩. | ವಿಶ್ವಾಮಿತ್ರನ ಸೃಷ್ಟಿ | .... ಶ್ರೀರಂಗ | ೧೯೩೪ |
| ೪. | ಧರ್ಮಸೆರೆ | . ಜಡಭರತ | ೧೯೩೫ |
| ೫. | ಧೂಮಕೇತು | .... ಕಡೆಂಗೋಡ್ಲು ಶಂಕರಭಟ್ಟ | ೧೯೩೬ |
| ೬. | ಸರಸಮ್ಮನ ಸಮಾಧಿ | .... ಕೋ. ಶಿ. ಕಾರಂತ | ೧೯೩೭ |
| ೭. | ಮಹಾಪೂರ | .... ಎಸ್. ಬಿ. ಕುಲಕರ್ಣಿ | ೧೯೩೮ |
| ೮. | ಸಂಧ್ಯಾರಾಗ | .... ಅ. ನ. ಕೃಷ್ಣರಾಯ | ೧೯೩೮ |
| ೯. | ಕಾರಣಪುರುಷ | .... ರಂ. ಶ್ರೀ. ಮುಗಳಿ | ೧೯೩೯ |
| ೧೦. | ಗ್ರಾಮಪಂಚಾನನ | .... ಬಾ. ಕೃ. ಲಕ್ಷ್ಮೇಶ್ವರ | ೧೯೪೦ |
| ೧೧. | ಗಾಳಿಗೋಪುರ | ... ನಾ. ಕಸ್ತೂರಿ | ೧೯೪೦ |
| ೧೨. | ಮಂಗಳಸೂತ್ರ | .. ಅ. ನ. ಕೃಷ್ಣರಾಯ | ೧೯೪೦ |
| ೧೩. | ಮರಳಿ ಮಣ್ಣಿಗೆ | ... ಕೋ. ಶಿ. ಕಾರಂತ | ೧೯೪೧ |
| ೧೪. | ಬೆಟ್ಟದ ಜೀವ | ... ಕೋ. ಶಿ. ಕಾರಂತ | ೧೯೪೩ |
| ೧೫. | ಚಕ್ರದೃಷ್ಟಿ | .. ನಾ. ಕಸ್ತೂರಿ | ೧೯೪೪ |
| ೧೬. | ಮಲಮಗಳು | .. ಎಂ. ವಿ. ಸೀತಾರಾಮಯ್ಯ | ೧೯೪೪ |
| ೧೭. | ನಟಸಾರ್ವಭೌಮ | ... ಅ. ನ. ಕೃಷ್ಣರಾಯ | ೧೯೪೪ |
| ೧೮. | ನಿಸರ್ಗ | ... ಮಿರ್ಜಿ ಅಣ್ಣಾರಾಯ | ೧೯೪೫ |
| ೧೯. | ಅಶಾಂತ | .. ಸತ್ಯಬೋಧ | ೧೯೪೫ |
| ೨೦. | ಭಗ್ನ ಮಂದಿರ | .... ಹೇಮಂತ | ೧೯೪೬ |
| ೨೧. | ದೇವತಾಮನುಷ್ಯ | .... ಕೆ. ಶಂಕರಭಟ್ಟ | ೧೯೪೭ |
| ೨೨. | ರಾಷ್ಟ್ರಪುರುಷ | .... ಮಿರ್ಜಿ ಅಣ್ಣಾರಾಯ | ೧೯೪೭ |
| ೨೩. | ಅನ್ನ | .... ರಂ. ಶ್ರೀ. ಮುಗಳಿ | ೧೯೪೮ |
| ೨೪. | ಮುನಿಯನ ಮಾದರಿ | .... ಕೆ. ಎ. ಎನ್. ರಾವ್ | ೧೯೪೯ |
| ೨೫. | ಗಂಗಾಸಾಕ್ಷಿ | .... ವರಗಿರಿ | ೧೯೪೯ |

| | | | |
|---|---|---|---|
| ೨೬. | ಮೋದಿನಾಪುರದ ಮಲ್ಲ | .... ಗುರುರಾಜ ಬಿ. ಜೋಶಿ | ೧೯೬೦ |
| ೨೭. | ಮಾದನ ಮಗಳು | ... ಎಂ. ವಿ. ಸೀತಾರಾಮಯ್ಯ | ೧೯೫೦ |
| ೨೮. | ಎರಡನೆಯ ಸಂಬಂಧ | . ಎನ್ಕೆ ಕುಲಕರ್ಣಿ | ೧೯೬೧ |
| ೨೯. | ಮರ್ಯಾದೆ ಮಹಲು | ಕೆ. ಎ. ಎಸ್. ರಾವ್ | ೧೯೫೧ |
| ೩೦. | ಗೃಹದಾರಣ್ಯಕ | .. ನಾ. ಕಸ್ತೂರಿ | ೧೯೫೩ |
| ೩೧. | ಗೃಹದೇವತೆ | . ಶ್ರೀಮತಿ ಚಂಪಕಮಾಲಾ | ೧೯೫೪ |
| ೩೨. | ಗಂಗವ್ವ ಮತ್ತು ಗಂಗಾಮಾಯಿ | ... ಎಸ್. ಆರ್. ಮೊಕಾಶಿ | ೧೯೫೬ |
| ೩೩. | ಸಮರಸವೇ ಜೀವನ | .... ವಿ. ಕೃ. ಗೋಕಾಕ | ೧೯೫೬ |


(ಸ್ವತಂತ್ರ ಐತಿಹಾಸಿಕ)


| | | | |
|---|---|---|---|
| ೩೪. | ರಾಜಯೋಗಿ | . ಆನಂದಕಂದ | ೧೯೩೫ |
| ೩೫. | ಯುವನಸ್ವೈರಂಧ್ರಿ | ... ಕೆರೂರ ವಾಸುದೇವಾಚಾರ್ಯ | ೧೯೫೧ |
| ೩೬. | ಶಾಂತಲಾ | ....ಕೆ. ವ್ಹಿ. ಅಯ್ಯರ್ | ೧೯೫೪ |


(ಅನುವಾದಿತ)


| | | | |
|---|---|---|---|
| ೩೭. | ಬ್ರಾಹ್ಮಣರ ಹುಡಿಗಿ(ಶರತ್‌ಚಂದ್ರ) | .. ಆರ್. ವ್ಯಾಸರಾಯ | ೧೯೩೪ |
| ೩೮. | ಹಳ್ಳಿಯ ಸಮಾಜ (ಶರತ್‌ಚಂದ್ರ) | .... ಆರ್. ವ್ಯಾಸರಾಯ | ೧೯೩೭ |
| ೩೯. | ಎರಡು ಧ್ರುವ (ಖಾಂಡೇಕರ್) | .... ವಿ. ಎಂ. ಇನಾಂದಾರ | ೧೯೩೭ |
| ೪೦. | ಪ್ರೇಮಾಹುತಿ (ಟಾಲ್‌ಸ್ಟಾಯ್) | .. ಗು. ಭೀ. ಜೋಶಿ | ೧೯೩೮ |
| ೪೧. | ಭಾರತಮಾರ್ಗ (ಇ. ಎಂ. ಫಾರ್ಸ್ಟರ್) | .. ಗು. ಭೀ. ಜೋಶಿ | ೧೯೩೯ |
| ೪೨. | ಇಂದ್ರಚಾಪ (ವಾಂಡಾ ವಾಸಿಲೆವ್ಸ್ಕಾ) | ತಲ್ಲೇರ್‌ಕರ | ೧೯೬೦ |
| ೪೩. | ಝೋಹರಾ (ಮೆಡೋಸ್ ಟೇಲರ್) | ... ಡಿ. ಎಚ್. ಕೊಪ್ಪರ | ೧೯೫೫ |


(ಪತ್ತೇದಾರಿ)


| | | | |
|---|---|---|---|
| ೪೪. | ಭರಮಪ್ಪನ ಭೂತ | . ಶ್ರೀರಂಗ | ೧೯೪೨ |
| ೪೫. | ಪಚ್ಚೆ ಉಂಗುರ | ... ಎಂ. ಜಿ. ವೆಂಕಟೇಶಯ್ಯ | ೧೯೪೨ |


**ನಾಟಕಗಳು :**

(ಸ್ವತಂತ್ರ ಸಾಮಾಜಿಕ)


| | | | |
|---|---|---|---|
| ೧. | ಜನನಾಯಕ | .... ವಿ. ಕೃ. ಗೋಕಾಕ | ೧೯೩೬ |
| ೨. | ಜಯಶ್ರೀ | .... ಚಿ. ಸದಾಶಿವಯ್ಯ | ೧೯೪೨ |
| ೩. | ಯುಗಾಂತರ | .... ವಿ. ಕೃ. ಗೋಕಾಕ | ೧೯೪೮ |

೪. ಬಿತ್ತಿದ ಬೆಳೆ .... ಕೋ. ಶಿ. ಕಾರಂತ ೧೯೪೮
೫. ಪರಿವರ್ತನ .... ಲಕ್ಷ್ಮಣರಾವ್ ಬೇಂದ್ರೆ ೧೯೪೮
೬. ಮಗು .... ಅಶ್ವತ್ಥ ೧೯೪೯
೭. ಹೊಸ ಸಂಸಾರ .... ದ. ರಾ. ಬೇಂದ್ರೆ ೧೯೫೦
೮. ಭಾಗ್ಯಶ್ರೀ .... ಲಕ್ಷ್ಮಣರಾವ್ ಬೇಂದ್ರೆ ೧೯೫೧
೯. ಪತಿತೋದ್ಧಾರ .... ಎನ್ಕೆ. ಹುಯಿಲಗೋಳ ೧೯೫೩
೧೦. ಆ ಮನಿ .... ಕೀರ್ತಿನಾಥ ಕುರ್ತಕೋಟಿ ೧೯೫೬

(ಸ್ವತಂತ್ರ ಐತಿಹಾಸಿಕ)

೧೧. ಸೇವಾಪ್ರದೀಪ .... ರಂ. ಶ್ರೀ. ಮುಗಳಿ ೧೯೩೬
೧೨. ತೆನ್ನಾಲಿ ರಾಮಕೃಷ್ಣ .... ಸಿ. ಕೆ. ವೆಂಕಟರಾಮಯ್ಯ ೧೯೪೩

(ಅನುವಾದಿತ)

೧೩. ಧರ್ಮಜ್ಯೋತಿ (ಟಾಲ್‌ಸ್ಟಾಯ್).... ದೊರೆಸ್ವಾಮಿ ಅಯ್ಯಂಗಾರ ೧೯೩೬
೧೪. ವೇಣುಮಾವ (ಚೆಕಾವ್ಹ್) .... ಶ್ರೀಮತಿ ಪ. ಸೀತಾದೇವಿ ೧೯೪೯

(ಏಕಾಂಕಗಳು)

೧೫. ಕೋಲ್ಮಿಂಚು .... ವಿವಿಧ ಲೇಖಕರು ೧೯೩೫
೧೬. ಮಿಂಚಿನ ಹುಡಿ .... ಕೃಷ್ಣಕುಮಾರ ೧೯೪೪
೧೭. ಎತ್ತಿದ ಕೈ .... ರಂ. ಶ್ರೀ. ಮುಗಳಿ ೧೯೪೭
೧೮. ವಿಮರ್ಶಕ ವೈದ್ಯ .... ವಿ. ಕೃ. ಗೋಕಾಕ ೧೯೪೬

(ಗೀತನಾಟಕಗಳು)

೧೯. ಪಾವನಪಾವಕ .... ರಂ. ಶ್ರೀ. ಮುಗಳಿ ೧೯೩೭
೨೦. ತಿರುಪಾಣಿ .... ಶ್ರೀನಿವಾಸ ೧೯೩೭
೨೧. ಸ್ವಪ್ನದರ್ಶಿ ಮತ್ತು ಇತರ ಗೀತನಾಟಕಗಳು.... ಕೀರ್ತಿನಾಥ ೧೯೫೬

**ಸಣ್ಣ ಕತೆಗಳು:**

೧. ನವಿಲುಗರಿ .... ವಿವಿಧ ಲೇಖಕರು ೧೯೩೩
೨. ಜೀವನ .... ಕೃಷ್ಣಕುಮಾರ ೧೯೩೪
೩. ಕುರಿಹಿಂಡು (ಪರಶುರಾಮ) .... ಜಲಧರ ೧೯೩೬
೪. ಪುಷ್ಪಮಾಲೆ .... ಶ್ರೀಸ್ವಾಮಿ ೧೯೩೭
೫. ಸೋಲೋಗೆಲುವೋ .... ದೇವುಡು ೧೯೩೬

| | | | |
|---|---|---|---|
| ೬. | ಹೂಬಾಣಗಳು (ಓಹೆನ್ರಿ) | .... ಪ. ರಮಾನಂದ | ೧೯೩೮ |
| ೭. | ತುಟಿಮೀರಿದುದು | .... ರಾ. ಶಿ. | ೧೯೩೯ |
| ೮. | ಮಾರ್ಗದರ್ಶಕ | .... ಎಂ. ವಿ. ಸೀತಾರಾಮಯ್ಯ | ೧೯೪೦ |
| ೯. | ವೈಯ್ಯಾರಿ | .... ಗೋರೂರ ರಾಮಸ್ವಾಮಿ | ೧೯೪೧ |
| ೧೦. | ಮೋಡಗಳು | .... ಶ್ರೀಸ್ವಾಮಿ | ೧೯೪೨ |
| ೧೧. | ಹೂವಿನ ಹಾಸಿಗೆ | ... ಹೊಯಿಸಳ | ೧೯೪೩ |
| ೧೨. | ಕನಸಿನ ಕೆಳದಿ | .... ರಂ. ಶ್ರೀ. ಮುಗಳಿ | ೧೯೪೩ |
| ೧೩. | ಚೀನದ ಬಾಳುಬದುಕು | .... ವಿವಿಧ ಲೇಖಕರು | ೧೯೫೦ |
| ೧೪. | ಬಾಳಹೊಳೆ | .... ಅಶ್ವತ್ಥ | ೧೯೫೦ |
| ೧೫. | ಪ್ರೇಮವಿಜಯ | .... ಕೆರೂರ ವಾಸುದೇವಾಚಾರ್ಯ | ೧೯೫೧ |
| ೧೬. | ತೊಳೆದ ಮುತ್ತು | .... ಕೆರೂರ ವಾಸುದೇವಾಚಾರ್ಯ | ೧೯೫೨ |
| ೧೭. | ಮಾಲಾ ಮತ್ತು ಇತರ ಕಥೆಗಳು | .... ಶ್ರೀಮತಿ ಕಾತ್ಯಾಯಿನಿ | ೧೯೫೩ |
| ೧೮. | ಕೆಂಪುಗುಲಾಬಿ | ... ಶ್ರೀಮತಿ ಎಂ. ಸೀತಾರತ್ನ | ೧೯೫೪ |
| ೧೯. | ಬಾಗಿನ | .... ಶ್ರೀಮತಿ ಲಲಿತಾ ರಾಮಣ್ಣ | ೧೯೫೫ |
| ೨೦. | ನಿರಾಭರಣ ಸುಂದರಿ | .... ದ. ರಾ. ಬೇಂದ್ರೆ | ೧೯೪೦ |

## ಲಲಿತ ಪ್ರಬಂಧಗಳು:

| | | | |
|---|---|---|---|
| ೧. | ಸುಳವು ಹೊಳವು | .... ವಿವಿಧ ಲೇಖಕರು | ೧೯೩೯ |

## ಆತ್ಮಚರಿತ್ರಗಳು:

| | | | |
|---|---|---|---|
| ೧. | ಕಾಳರಾತ್ರಿ | .... ಮಧುರಚೆನ್ನ | ೧೯೩೪ |
| ೨. | ಹತ್ತುವರ್ಷ | .... ಜಿ. ಪಿ. ರಾಜರತ್ನಂ | ೧೯೩೮ |
| ೩. | ಬಿಡುಗಡೆಯ ಬೆಲೆ | .... ಅಶ್ವತ್ಥನಾರಾಯಣ | ೧೯೪೭ |
| ೪. | ಜಡಭರತನ ಕನಸುಗಳು | .... ಜಡಭರತ | ೧೯೪೯ |

## ಜೀವನ ಚರಿತ್ರೆ:

| | | | |
|---|---|---|---|
| ೧. | ಮೇಡಂಕ್ಯೂರಿ (ಈವ್ಹಾಕ್ಯೂರಿ) | .... ಶ್ರೀಮತಿ ಕೆ. ವಿ ರತ್ನಮ್ಮ | ೧೯೪೨ |

## ಪತ್ರ–ದಿನಚರಿ:

| | | | |
|---|---|---|---|
| ೧. | ಸಮುದ್ರದಾಚೆಯಿಂದ | .... ವಿ. ಕೃ. ಗೋಕಾಕ | ೧೯೩೭ |
| ೨. | ದಿಲ್ಲೀಶ್ವರನ ದಿನಚರಿ | .... ನಾ. ಕಸ್ತೂರಿ | ೧೯೩೬ |

## ವಿಮರ್ಶೆಯ ಸಾಹಿತ್ಯ:

| | | | |
|---|---|---|---|
| ೧. | ನಕ್ಕಳಾತಾಯಿ | .... ಜಿ. ಪಿ. ರಾಜರತ್ನಂ | ೧೯೪೪ |
| ೨. | ಸಾಹಿತ್ಯ ಮತ್ತು ವಿಮರ್ಶೆ | .... ದ. ರಾ ಬೇಂದ್ರೆ | ೧೯೪೦ |
| ೩. | ಸಾಹಿತ್ಯ ಸಂಶೋಧನ | .... ದ. ರಾ. ಬೇಂದ್ರೆ | ೧೯೪೦ |
| ೪. | ಯುಗಪ್ರವರ್ತಕ ಬಸವಣ್ಣ | ... ಚಿಂತಾಮಣಿ | ೧೯೩೯ |
| ೫. | ಕಣ್ಮರೆಯಾದ ಕನ್ನಡ | .... ಶಂ. ಬಾ. ಜೋಶಿ | ೧೯೩೪ |
| ೬. | ದತ್ತವಾಣಿ | .... ಮಿರ್ಜಿ ಅಣ್ಣಾರಾಯ | ೧೯೪೬ |

## ಆಧ್ಯಾತ್ಮಿಕ ಸಾಹಿತ್ಯ:

| | | | |
|---|---|---|---|
| ೧. | ಯಾತ್ರಿಕ | .... ರಂಗನಾಥ ದಿವಾಕರ | ೧೯೫೪ |
| ೨. | ಮಾತೃವಾಣಿ | .... ಶಿಶು ಮಧುರಚೆನ್ನ | ೧೯೪೭ |

## ಕವನ ಸಂಗ್ರಹಗಳು:

| | | | |
|---|---|---|---|
| ೧. | ಪಯಣ | .... ವಿನಾಯಕ | ೧೯೩೭ |
| ೨. | ಸಮುದ್ರಗೀತಗಳು | .... ವಿನಾಯಕ | ೧೯೪೦ |
| ೩. | ಬೆಳದೇಗುಲದಲ್ಲಿ | .... ವಿನಾಯಕ | ೧೯೫೩ |
| ೪. | ಬಾಸಿಗ | ... ರಂ. ಶ್ರೀ. ಮುಗಳಿ | ೧೯೪೦ |
| ೫. | ಸಖೀಗೀತ | .... ಅಂಬಿಕಾತನಯದತ್ತ | ೧೯೩೭ |
| ೬. | ಗಂಗಾವತರಣ | .... ಅಂಬಿಕಾತನಯದತ್ತ | ೧೯೫೧ |
| ೭. | ಮಹಾಯುದ್ಧ | .... ಅಶ್ವತ್ಥ | ೧೯೪೭ |
| ೮. | ಗರಿ | ... ಅಂಬಿಕಾತನಯದತ್ತ | ೧೯೫೧ |

## ಇತರ

| | | | |
|---|---|---|---|
| ೧. | ತ್ರಿಪುರದಹನ | .... ದೊರೆಸ್ವಾಮಿ ಅಯ್ಯಂಗಾರ | ೧೯೩೩ |
| ೨. | ಕೆನ್ಸಿಂಗ್‌ಟನ್ ಪಾರ್ಕ | .... ಕೆ. ಗೋಪಾಲಕೃಷ್ಣರಾವ | ೧೯೪೩ |
| ೩. | ಬಹುಮಾನ ಪಡೆದ ಬರಹಗಳು | .... ವಿವಿಧ ಲೇಖಕರು | ೧೯೪೯ |

**ವಿ. ಸೂ.** ಈ ಪುಸ್ತಕಗಳಲ್ಲಿ ಮಾರಾಟಕ್ಕೆ ಈಗ ದೊರೆಯುವ ಪುಸ್ತಕಗಳ ಪಟ್ಟಿಯೊಂದನ್ನು ಬೇರೆಯಾಗಿ ಕೊಡಲಾಗಿದೆ. ಬೇಕಾದವರು ಆ ಪಟ್ಟಿಯನ್ನು ನೋಡಿ ಬೇಡಿಕೆ ಕೊಡಬೇಕಾಗಿ ವಿನಂತಿ.

| | |
|---|---|
| ಕಾದಂಬರಿಗಳು....... | ೪೫ |
| ನಾಟಕಗಳು............ | ೨೧ |
| ಸಣ್ಣ ಕತೆಗಳು ........ | ೨೦ |
| ಲಲಿತ ಪ್ರಬಂಧಗಳು.... | ೧ |
| ಆತ್ಮಚರಿತ್ರಗಳು ........ | ೪ |
| ಜೀವನಚರಿತ್ರ ........ | ೧ |
| ಪತ್ರ-ದಿನಚರಿ........... | ೨ |
| ವಿಮರ್ಶೆಯ ಸಾಹಿತ್ಯ.... | ೬ |
| ಆಧ್ಯಾತ್ಮಿಕ ಸಾಹಿತ್ಯ .... | ೨ |
| ಕವನ ಸಂಗ್ರಹಗಳು.... | ೮ |
| ಇತರ.................. | ೩ |
| | ೧೧೩ |